ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

ಬೆಲೆ: ಎರಡು ಆಣೆ

# ಕರ್ಮವೀರ

KARMAVEER
WEEKLY
HUBLI
NOV. 4
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೪ — ೧೧ — ೧೯೪೬ [ ಸಂಚಿಕೆ ೩೦


ಪೂರ್ವ ಸಿದ್ಧತೆಯಿಂದ

# ನೌಖಾಲಿ ತಿಪ್ಪೇರಾ ಜಿಲ್ಲೆಗಳಲ್ಲಿ ಹತ್ಯಾಕಾಂಡ

## ಕೊಲೆ, ಕೊಳ್ಳೆ, ಸುಲಿಗೆ, ಧರ್ಮಾಂತರ, ಒತ್ತಾಯದ ವಿವಾಹ

## ಹೊಣೆ ಹಾರಿಸಿಕೊಳ್ಳಲು ಬಂಗಾಲ ಲೀಗ ಪ್ರಮುಖರ ಸಾಹಸ

### ಸೇಡು ತೀರಿಸಿಕೊಳ್ಳಬಯಸದೆ ತಾಳ್ಮೆಯಿಂದಿರಲು ಗಾಂಧೀಜಿಯವರ ಬಿನ್ನಹ

ಅಕ್ಟೋಬರ ೧೦ ರಿಂದ ಪೂರ್ವ ಬಂಗಾಲದ ನೌಖಾಲಿ ತಿಪ್ಪೇರಾ ಜಿಲ್ಲೆಗಳಲ್ಲಿ ನಡೆದ ಹತ್ಯಾಕಾಂಡ ಇದೀಗ ಹಿಡಿತದಲ್ಲಿ ಬಂದಿದೆಂದು ಬಂಗಾಲ ಸರಕಾರದವರು ಪ್ರಕಟನೆ ಹೊರಡಿಸಿದ್ದಾರೆ. ಅನಾಹುತಕ್ಕೊಳಗಾದ ಭಾಗದಲ್ಲಿ ಪ್ರತ್ಯಕ್ಷ ಸಂಚರಿಸಿ ಬಂದ ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷ ಅಚಾರ್ಯ ಕೃಪಲಾನಿ, ಶರಚ್ಚಂದ್ರ ಬೋಸ ಮೊದಲಾದವರು ಹೊರಡಿಸಿದ ಪ್ರಕಟನೆಗಳಿಂದ ಅಲ್ಲಿನ ಹತ್ಯಾಕಾಂಡ ಇನ್ನೂ ನಿಂತಿಲ್ಲೆಂದು ಕಂಡು ಬರುತ್ತದೆ. ಈ ಹತ್ಯಾಕಾಂಡದ ಸಂಬಂಧದಲ್ಲಿ ಈ ವರೆಗೆ ಬಂದ ವರದಿಗಳು, ಹೊರಡಿಸಲ್ಪಟ್ಟ ಪ್ರಕಟನೆಗಳು ಮೊದಲಾದವುಗಳನ್ನು ಸಂಕ್ಷೇಪತಃ ಇಲ್ಲಿ ಕೊಡಬಯಸುತ್ತೇವೆ. ಇದರಿಂದ ಅಲ್ಲಿನ ಭೀಕರ ಪರಿಸ್ಥಿತಿಯ ಚಿತ್ರವು ಎಲ್ಲರಿಗೂ ಗೊತ್ತಾಗುವುದು.

### ನಾಲ್ಕುನೂರು ಹಳ್ಳಿಗಳಲ್ಲಿ ಅನರ್ಥ

ಕಲಕತ್ತೆಯಿಂದ ಹೊರಡುವ ಆಂಗ್ಲೋ—ಇಂಡಿಯನ್ ಪತ್ರಿಕೆಯಾದ ಸ್ಟೇಟ್ಸಮನ್ ಪತ್ರಿಕೆ ತನ್ನ ವಿಶೇಷ ಸುದ್ದಿಗಾರನನ್ನು ಈ ಭಾಗದಲ್ಲಿ ಸಂಚರಿಸಲು ಕಳಿಸಿ ಅವನಿಂದ ಬಂದ ವರದಿಯನ್ನು ಪ್ರಸಿದ್ಧಿಸಿದೆ. ಪೂರ್ವ ಬಂಗಾಲದಲ್ಲಿ ೪೦೦ ಹಳ್ಳಿಗಳಲ್ಲಿಯ ೧೫೦೦೦೦ ಜನರು ಸಾಮೂಹಿಕ ಪುಂಡಾಟಿಕೆಯಿಂದ ಅನಾಹುತಕ್ಕೊಳಗಾಗಿದ್ದಾರೆ. ಜನರನ್ನು ಮತಾಂತರಗೊಳಿಸುವದು ಮತ್ತು ಸ್ತ್ರೀಯರನ್ನು ಅದರಲ್ಲಿಯೂ ಹುಡಿಗೆಯರನ್ನು ಅಪಹರಿಸುವದು ಇವೇ ಈ ಪುಂಡಾಟಿಕೆಯ ಉದ್ದೇಶವಾಗಿದೆ. ಚಾಂದಪುರ ಸಬ್ ಡಿವಿಜನದಲ್ಲಿ ಈ ಪುಂಡಾಟಿಕೆ ವಿಶೇಷವಾಗಿದೆ. ಅನೇಕ ಭಾಗಗಳು ಈ ಪುಂಡರ ಹಿಡಿತದಲ್ಲಿವೆಂದು ಹೇಳಲಾಗುತ್ತದೆ. ಒಂದು ಠಾಣೆಯ ಮೇಲೆ ಪುಂಡರು ಏರಿ ಹೋದಾಗ ಪೋಲೀಸರು ಅವರನ್ನು ಪ್ರತಿಭಟಿಸದೆ ಸುಮ್ಮನಿದ್ದರು. ಜಿಲ್ಹಾ ಮ್ಯಾಜಿಸ್ಟ್ರೇಟರು ಬಂದ ನಂತರ ಅವರನ್ನು ಹೊರಗೆಡವಲಾಯಿತು. ಪೀಡಿತ ಭಾಗದಲ್ಲಿ ವ್ಯವಹಾರವೆಲ್ಲ ಕಟ್ಟಾಗಿ ಹೋಗಿದೆ. ಜನರು ತಂಡತಂಡಗಳಲ್ಲಿ ಊರು ಬಿಡುತಿರುವರು. ಚಾಂದಪುರದಲ್ಲಿ ಆಶ್ರಯ ಪಡೆದಿರುವವರ ಸಂಖ್ಯೆ ೧೦ ಸಾವಿರಕ್ಕೂ ಮಿಕ್ಕಿದೆ. ಸ್ಥಳ ಸಿಕ್ಕದಿದ್ದ ಜನರು ರಸ್ತೆಗಳಲ್ಲಿ ಫ್ಲಾಟುಗಳಲ್ಲಿ ಮತ್ತು ರೇಲ್ವೆ ನಿಲ್ದಾಣದಲ್ಲಿರುತಿರುವರು. ಪರಿಹಾರ ಸಂಸ್ಥೆಗಳು ಕೆಲಸ ನಡೆಸಿವೆ. ೧೦ ನೇ ತಾರೀಖಿಗೆ ಫರೀದಗಂಜ ಪ್ರದೇಶದಲ್ಲಿ ಪ್ರಾರಂಭವಾದ ಪುಂಡಾಟಿಕೆ ೧೪ ಕ್ಕೆ ಇಡೀ ಸಬ್ ಡಿವಿಜನ್‌ದಲ್ಲಿ ಹಬ್ಬಿತು. ಅಂದಿನಿಂದ ಹಾಜೀಗಂಜದಲ್ಲಿ ಕೊಲೆ ಸುಲಿಗೆಗಳು ಪ್ರಾರಂಭವಾಗಿವೆಂದು ಮುಂತಾಗಿ ೧೯ ನೇ ತಾರೀಖಿನ ವರದಿ.

### ಎಲ್ಲರಿಗೂ ಮುಸಲ್ಮಾನ ದೀಕ್ಷೆ

ನೌಖಾಲಿ ಮತ್ತು ತಿಪ್ಪೇರಾ ಭಾಗಗಳಿಂದ ಕಲಕತ್ತೆಗೆ ಬಂದ ನಿರಾಶ್ರಿತರು ಅರಾಜಕತೆ ಹಾಗು ಪುಂಡಾಟಿಕೆಗಳು ನಡೆದ ಪ್ರದೇಶದ ಸಮೀಪದ ಹಳ್ಳಿಗಳಿಂದ ಇವರು ಬಂದಿರುವರು. ಬಾಲಕರು ಪುಂಡರ ದೃಷ್ಟಿಗೆ ಬೀಳದಂತೆ ಅವರನ್ನು ಅರಣ್ಯಗಳಿಗೆ ಕರೆದೊಯ್ದು ಅಲ್ಲಿ ಅಡಗಿಸಿಡಲಾಗುತ್ತದೆ. ಎಷ್ಟೋ ಸ್ತ್ರೀಯರು ಕೆರೆಹೊಂಡಗಳಲ್ಲಿ ಕಾಲಕಳೆಯುತ್ತಿರುವರು. ಎಂದು ಓರ್ವ ಸ್ತ್ರೀಯು ತಿಳಿಸಿದಳು ಒಂದು ಹಳ್ಳಿಯಲ್ಲಿ ಸ್ತ್ರೀಯರು ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುವದಕ್ಕಾಗಿ ಪುಂಡರೊಡನೆ ಕಾದಿದರೆಂದೂ ಅವಳು ಹೇಳಿದಳು. ಮಂಗಳವಾರ ರಾತ್ರಿ ನಮ್ಮ ನೆರೆಯ ಹಳ್ಳಿಯ ಮೇಲೆ ಪುಂಡರು ದಾಳಿ ಮಾಡಿ ಅನೇಕ ಮನೆಗಳನ್ನು ಭಸ್ಮ ಮಾಡಿದರೆಂದೂ ಮುಂತಾಗಿಯೂ ಅವಳು ಹೇಳಿದಳು.—

ನೌಖಾಲಿ ಜಿಲ್ಹೆಯ ತೋಬಗಾ ಎಂಬನಗರದ ಸುದ್ದಿಗಾರನೊಬ್ಬನು ತಾ ೧೦ರ ರಾತ್ರಿ ನಾವು ಮುಸಲ್ಮಾನ ದೀಕ್ಷೆಯನ್ನು ಹೊಂದಿದೆವು. ರಾಮಪುರ ದಾಸಕೋರಿಯಾ ಮೊದಲಾದ ಹಳ್ಳಿಗಳ ಜನರೂ ಇದರಂತೆಯೆ ಮಾಡಿದ್ದಾರೆ. ಅಂದುರಾತ್ರಿ ಪುಂಡರ ತಂಡವೊಂದು ಬಂದು ಇಸ್ಲಾಂ ಮತವನ್ನು ಸ್ವೀಕರಿಸಬೇಕೆಂದೂ ಸ್ವೀಕರಿಸದಿದ್ದರೆ ಎಲ್ಲರನ್ನೂ ಜೀವಂತ ಸುಟ್ಟುಬಿಡಲಾಗುವದೆಂದೂ ಬೆದರಿಕೆ ಹಾಕಿತು. ನೌಖಾಲಿ ಜಿಲ್ಹೆಯನ್ನು ಒಂದೇವಾರದಲ್ಲಿ ಪೂರ್ಣ ವಶಪಡಿಸಿಕೊಳ್ಳುವದೇ ಅದರ ಉದ್ದೇಶವಾಗಿತ್ತು.

ಸಿರಿವಂತ ಸಂಭಾವಿತ ಮನೆಗೆ ಕೊಳ್ಳಿ ಇಡುವದು, ಲೆಕ್ಕವಿಲ್ಲದಷ್ಟು ನಾಗರಿಕರನ್ನು ಅತ್ಯಾಚಾರಕ್ಕೆ ಗುರಿಪಡಿಸಿ ಕೊಲ್ಲಿಸುವದು, ಹಳ್ಳಿಗಳಲ್ಲಿಯ ಕುಟುಂಬ ಕುಂಟುಬಗಳನ್ನೆಲ್ಲ ಮತಾಂತರಿಸುವದು ಒತ್ತಾಯದ ಮದುವೆ, ಮದುವೆಯಾದವರಿಗೆ ಅವರ ಪ್ರಿಯ ಜನರ ಎದುರಿನಲ್ಲಿ ಪುನ: ಮದುವೆ ಮಾಡುವದು, ಗೋವುಗಳನ್ನು ಕೊಲ್ಲಿಸುವದು, ದೇವಾಲಯವನ್ನು ನಾಶಪಡಿಸುವದು ಇವೆ ಮೊದಲಾದ ಹೇಯ ಕೃತಿಗಳನ್ನು ನೌಖಾಲಿ ತಿಪ್ಪೇರಾ ಜಿಲ್ಹೆಗಳಲ್ಲಿ ನಡೆಸಿದ್ದಾರೆಂದು ಇತ್ತೀಚೆ ಆ ಪ್ರದೇಶಕ್ಕೆ ಭೆಟ್ಟಿಕೊಟ್ಟು ಬಂದ ಸುದ್ದಿಗಾರನು ಕೊಮಿಲಾದಿಂದ ಬರೆಯುತ್ತಾನೆ. ಈ ಜಿಲ್ಹೆಯಲ್ಲಿಯ ಜನರೀಗ ನಿಷಿದ್ಧ ಪದಾರ್ಥನಳನ್ನು ತಿನ್ನಬೇಕಾಗಿದೆ. ಪರಧರ್ಮದ ಕಾರ್ಯಗಳನ್ನು ಮಾಡಬೇಕಾಗಿದೆ. ಇವರಲ್ಲಿ ತಾಳ್ಮೆಯಿಲ್ಲದಂತಾಗಿದೆ. ರೋಗರುಜೆಗಳಿಗೆ ಬಲಿಯಾಗುವರು ಅದಷ್ಟು ಬೇಗ ಇವರ ಬಿಡುಗಡೆಯಾಗಬೇಕು. ಅಕ್ಟೋಬರ ೧೦ ರಿಂದ ಈ ಪುಂಡರ ಲೆಕ್ಕ ನಡೆದಿದ್ದರೂ ಆ ಜಿಲ್ಹೆಗಳಲ್ಲಿಡಲಾದ ಪೋಲೀಸ ಸೈನಿಕರು ಒಮ್ಮೆಯೇ ಮಾತ್ರ ಗೋಳೀಬಾರ ಮಾಡಿದರು. ಯಾರನ್ನೂ ಸೆರೆಹಿಡಿಯಲಾಗಿಲ್ಲ. ಸಂರಕ್ಷಣೆ ದೊರೆಯದ್ದರಿಂದ ಸಾವಿರಾರು ಜನ ಆ ಪ್ರದೇಶ ಬಿಡಹತ್ತಿದ್ದಾರೆ.

### ಸರಕಾರೀ ಪ್ರಕಟನೆ

ಬಂಗಾಲ ಗವ್ಹರ್ನರರು ಮುಖ್ಯ ಮಂತ್ರಿ ಸುಹ್ರವರ್ದಿ ಮತ್ತು ಪೋಲೀಸಅಧಿಕಾರಿಗಗಳು ಈ ಭಾಗಗಳನ್ನು ಸಂಚರಿಸಿ ಬಂದ ನಂತರ ೧೯ ನೇ ತಾರೀಕು ಹೊರಡಿಸಿದ ಪ್ರಕಟನೆಯು 'ಆಶಯವಿಂತಿದೆ. ಫೇಣಿಯಲ್ಲಿ ಗವರ್ನರರು ಸ್ಥಳೀಯ ಅಧಿಕಾರಿಯೊಡನೆ ಎರಡು ಗಂಟೆ ಚರ್ಚೆ ಮಾಡಿದರು. ಈಗ ಆಯಾ ಸ್ಥಳಗಳಿಂದ ವರದಿಗಳು ಬರಹತ್ತಿವೆ. ಗುರುವಾರ ನೌಖಾಲಿ ಲಕ್ಷಂದ ನಡುವಿನ ರಸ್ತೇಗೇನೂ ಧಕ್ಕೆಯಾಗಿರಲಿಲ್ಲ. ಅದಕ್ಕೂ ಪಶ್ಚಿಮಕ್ಕೆ ಪುಂಡರು ಕೆಲ ಗುಡಿಸಲುಗಳನ್ನು ಸುಡುತಿದ್ದು ನಿರಾಶ್ರಿತರು ಓಡಿಹೋಗುತಿದ್ದರು. ಶುಕ್ರವಾರ ಪುಂಡರ ಚಟುವಟಿಕೆ ನಿರ್ಬಂಧಿತವಾಗಿದ್ದವು. ಈಗ ಅಲ್ಲಲ್ಲಿ ಇಡಲಾಗಿರುವ ಪೋಲೀಸರೂ ಸೈನಿಕರೂ ಪರಿಸ್ಥಿತಿಯನ್ನು ಎದುರಿಸಲುಸಾಕಷ್ಟಿದ್ದಾರೆ. ನೌಖಾಲಿ ತಿಪ್ಪೇರಾ ಜಿಲ್ಹೆಗಳ ಫರೀದಗಂಜ ಚಾಂದಪೂರ ಪ್ರದೇಶದಲ್ಲಿ ಪುಂಡರು ನಡೆಸಿದ ಅಲ್ಪ ಚಟುವಟಿಕೆಗಳನ್ನು ಬಿಟ್ಟರೆ ಉಳಿದ ಪ್ರದೇಶವೆಲ್ಲ ಶಾಂತವಿದೆ. ಈ ಪ್ರದೇಶಗಳಲ್ಲಿ ಸತ್ತವರ ಸಂಖ್ಯೆ ಬಹಳಿದ್ದರೂ ಪತ್ರಿಕೆಗಳಲ್ಲಿ ಪ್ರಕಟಿಸಲ್ಪಟ್ಟಂತೆ ಸಾವಿರಗಟ್ಲೆ ಜನ ಮಾತ್ರ ಸತ್ತಿಲ್ಲೆಂದು ಖಂಡಿತವಾಗಿ ತಿಳಿಯುತ್ತದೆ.

### ರೋಮಾಂಚಕಾರಕ ಹೋರಾಟ

ರಾಮಗಂಜದ ಸುಪ್ರಸಿದ್ಧ ಜಮೀನದಾರರೂ ನೌಖಾಲಿ ಜಿಲ್ಹೆ ಹಿಂದೂ ಮಹಾಸಭಾ ಹಾಗು ವಕೀಲ ಸಂಘದ ಅಧ್ಯಕ್ಷರೂ ಅದ ಶ್ರೀ ರಾಜೇಂದ್ರಲಾಲ ಇವರು ಗುಂಡರೊಡನೆ ಎರಡು ದಿನ ನಡೆಸಿದ ರೋಮಾಂಚಕಾರಕ ಹೋರಾಟವನ್ನು ಪ್ರತ್ಯಕ್ಷದರ್ಶಿಯಾಗಿದ್ದ ಭಾರತ ಸೇವಾಶ್ರಮದ ಸ್ವಾಮಿ ತ್ರ್ಯಂಬಾನಂದರು ಈ ರೀತಿ ವರ್ಣಿಸಿರುತ್ತಾರೆ.

'ಅಕ್ಟೋಬರ ೧೦ ನೇ ದಿನಾಂಕ ಬೇಗಂಗಂಜದ ಹಿಂದಿನ ಓರ್ವ ಎಂ. ಎಲ್. ಎ. ಗಳು ಪೇಟೆಯಲ್ಲಿ ಸಭೆ ಸೇರಿ ಅಧಿಕಾರಿಗಳ ಸಮ್ಮುಖದಲ್ಲಿಯೆ ಉದ್ರೇಕಕಾರಕ ಭಾಷಣ ಮಾಡಿ ವಿಶಿಷ್ಟ ಜಾತಿಯ ಜನರ ಮೇಲೆ ದಾಳಿ ಪ್ರಾರಂಭಿಸಲು ೧೫೦೦೦ ಶ್ರೋತ್ರುಗಳನ್ನು ಪ್ರೇರೇಪಿಸಿದರು. ಅಗ ಆ ಜನಜಂಗುಳಿ, ಇಡೀ ಪೇಟೆಯನ್ನು ಲೂಟಿ ಮಾಡಿ ಅಂಗಡಿಗಳಿಗೆ ಕೊಳ್ಳಿ ಕೊಟ್ಟಿತು. ಆ ನಂತರ ಜನರುತಂಡತಂಡಗಳಾಗಿ ಊರಿನ ಬೇರೆ ಬೇರೆ ಭಾಗಗಳಲ್ಲಿ ನುಗ್ಗಿದರು. ಒಂದುತಂಡವು ಸುರೇಂದ್ರಕುಮಾರ ಎಂಬಜಮೀನದಾರರ ಮನೆ ಮುತ್ತಿ ಅದಕ್ಕೆ ಬೆಂಕಿ ಹಚ್ಚಿ ಜಮೀನದಾರರನ್ನೂ ಅವರ ಮನೆಯವರನ್ನೂ ಕೊಂದು ಬೆಂಕಿಯಲ್ಲಿ ಒಗೆಯಿತು. ಅವರ ಮನೆಯಲ್ಲಿ ಆಶ್ರಯ ಪಡೆದಿದ್ದ ೪೦೦ ಜನ ಸ್ತ್ರೀ-ಪುರುಷರು ಮತ್ತು ಮಕ್ಕಳನ್ನು ಸಹ ಅದು ಉಳಿಸಲಿಲ್ಲ. ಅವರನ್ನೂ ಚಂಡಾಡಿ ಅಗ್ನಿನಾರಾಯಣನಿಗೆ ಅಹುತಿ ಕೊಟ್ಟಿತು. ಅನಂತರ ನೆರೆಯ ಕೆಲವು ಹಳ್ಳಿಗಳನ್ನು ನುಗ್ಗಿ ಲೂಟಿ ಮಾಡಿದರು. ಇನ್ನೊಂದು ತಂಡ ಬೇರೆ ಕೆಲ ಹಳ್ಳಿಗಳಿಗೆ ನುಗ್ಗಿ ಕೊಲೆ ಕೊಳ್ಳಿ ಮತ್ತು ಸುಲಿಗೆಯನ್ನು ನಡೆಸಿತು. ಬೇರೆ ಕೆಲವರನ್ನು ಮತಾಂತರಗೊಳಿಸಿ . ಅಥವಾ ಮಾನಭಂಗ ಮಾಡಿ ಇಲ್ಲವೆ ಒತ್ತಾಯದಿಂದ ಮದುವೆ ಮಾಡಿಸಿ ಪ್ರಾಣದಾನ ಮಾಡಿತು.

ಮೂರನೆಯ ತಂಡವು ರಾಯಬಹಾದ್ದೂರ ಶ್ರೀ ರಾಜೇಂದ್ರಲಾಲರ ಮನೆಯನ್ನು ಮುತ್ತಿತು. ಅಲ್ಲಿ ಕೂಡಿದ್ದ ಜನ ಈ ಪುಂಡರನ್ನು ತಡೆಗಟ್ಟಿ ಹಿಮ್ಮೆಟ್ಟಿಸಿತು. ಇಂತು ನಿರಾಶೆಗೊಂಡ ಜನಜಂಗುಳಿ ಮರಳಿ ಹೋಗುವಾಗ ಕೈಗೆ ಸಿಕ್ಕ ನಿರಪರಾಧಿಗಳ ಮೇಲೆ ದಾಳಿ ಮಾಡಿ ಅವರ ಮನೆಗಳಿಗೆ ಬೆಂಕಿ ಹಚ್ಚಿದ್ದಲ್ಲದೆ ಅನೇಕ ದೇವಾಲಯಗಳನ್ನು ಭ್ರಷ್ಟಗೊಳಿಸಿತು. ಈ ಅವಧಿಯಲ್ಲಿ ರಾಜೇಂದ್ರಲಾಲರು ಬೇಗಂಗಂಜ ಠಾಣಾ ಪೋಲೀಸರಿಗೆ ಬರೆಹ ಮೂಲಕ ತಕರಾರು ಕಳಿಸಿ ಪೋಲೀಸರ ಸಹಾಯ ಕೋರಿದರು. ಆದರೆ ಯಾರೂ ಬಾರದ್ದರಿಂದ ರಾಜೇಂದ್ರಲಾಲರು ಇಡೀ ರಾತ್ರಿ ಚಿಂತಾತುರರಾಗಿ ಕಳೆಯಬೇಕಾಯಿತು. ಮರುದಿನ ಬೆಳಗ್ಗೆ ಪುಂಡರು ಹೆಚ್ಚು ಸುಸಜ್ಜಿತರಾಗಿ ಬಂದು ರಾಜೇಂದ್ರಲಾಲರ ಮನೆಯ ಮೇಲೆ ಮತ್ತೆ ದಾಳಿ ಮಾಡಿದರು. ಆಗ ನಾನೂ ಒಳಗಿದ್ದೆ. ಪುಂಡರು ಸುತ್ತಲಿಂದ ದಾಳಿ ಮಾಡಿದ್ದರೂ ಒಳಗಿನವರು ಎದೆಗುಂದದೆ ಸಾಹಸದಿಂದ ಹೋರಾಡಿ ಮತ್ತೆ ಅವರನ್ನು ಹಿಂದೂಡಿದರು. ಹೀಗೆ ಹಲವು ಸಲ ಭಗ್ನ ಮನೋರಥರಾದ ಪುಂಡರು ಅಂದು ಮಧ್ಯಾಹ್ನದೊಳಗಾಗಿ ಮೂರು ಸಲ ಹೋರಾಡಿದರು. ಆದರೂ ಅವರ ಉದ್ದೇಶ ಫಲಿಸಲಿಲ್ಲ. ನಾಲ್ಕನೆಯ ಸಲ ಮಾತ್ರ ಅವರಿಗೆ ಯಶಸ್ಸು ದೊರೆಯಿತು. ರೊಚ್ಚಿಗೆದ್ದಿದ್ದ ಜನಜಂಗುಳಿ ಮತ್ತೆ ಆ ಮನೆಯನ್ನು ಮುತ್ತಿ ಅದಕ್ಕೆ ಬೆಂಕಿ ಹಚ್ಚಿ ರಾಜೇಂದ್ರಲಾಲರನ್ನೂ ಅವರ ಮನೆಯವರನ್ನೂ ಮನೆಯಲ್ಲಿ ಆಶ್ರಯ ಹೊಂದಿದವರನ್ನೂ ಕೊಂದು ಹೋಳಿ ಮಾಡಿದರು. ನಾನು ಮಾತ್ರ ಪುಂಡರು ಮನೆಯನ್ನು ಪ್ರವೇಶಿಸಿದ ಕೂಡಲೆ ಹೊರಬಿದ್ದು ಅರ್ಧ ಗಂಟೆಯ ನಂತರ ತಿರುಗಿ

—೨ನೇ ಪುಟಕ್ಕೆ

# ನೌಖಾಲಿ ತಿಪೇರಾ ಜಿಲ್ಹೆಗಳಲ್ಲಿ ಹತ್ಯಾಕಾಂಡ

(ಮೊದಲನೆ ಪುಟದಿಂದ)

ಬಿರುವಷ್ಟರಲ್ಲಿ ಮನೆ ಅಗ್ನಿನಾರಾಯಣನಿಗೆ ಆಹುತಿಯಾಗಿತ್ತು. ಹೆಣಗಳು ಅತ್ತಿತ್ತ ಬಿದ್ದಿದ್ದವು. ಆಗ ನಾನು ಅಲ್ಲಿಂದ ಕಾಲ್ದೆಗೆದು ಮಧ್ಯರಾತ್ರಿಯ ನಂತರ ನದಿಯನ್ನು ಈಸಿ ಇನ್ನೊಂದು ದಂಡೆಯನ್ನು ಮುಟ್ಟಿದೆ. ಮೇಲೆ ಮಳೆ ಸುರಿಯುತಿತ್ತು. ಆದರೂ ಪುಂಡರು ನನ್ನನ್ನು ಬೆನ್ನಟ್ಟಿದರು. ನಾನು ಬಹಳ ಶ್ರಮದಿಂದ ಅದು ಹೇಗೋ ಅವರಿಂದ ಪಾರಾದೆ. ಪೋಲೀಸರಿಗೆ ಎಲ್ಲವನ್ನೂ ತಿಳಿಸಿದೆ.

## ಗವರ್ನರರ ವರದಿ

ಬಂಗಾಲ ಗವರ್ನರರಾದ ಸರ್ ಫ್ರೆಡ್ರಿಕ್ ಬರ್‍ರೋ ಬ್ರಿಟಿಶ್ ಸರಕಾರಕ್ಕೆ ಈ ಹತ್ಯಾಕಾಂಡದ ಸಂಬಂಧದಲ್ಲಿ ಒಂದು ವರದಿಯನ್ನು ೨೧ನೇ ತಾರೀಕಿನ ದಿನ ಕಳಿಸಿರುತ್ತಾರೆ. ಅದರಲ್ಲಿ ಅವರು ಸತ್ತವರ ಸಂಖ್ಯೆ ಮೂರಂಕಿಯನ್ನು ಮೀರಿಲ್ಲೆಂದು ಉಲ್ಲೇಖಿಸಿದ್ದಾರೆ.

ಹಿಂದುಗಳ ವಿರುದ್ಧ ಮುಸಲ್ಮಾನರು ಈ ಭಾಗದಲ್ಲಿ ದಾಳಿ ಮಾಡಿರುವದಿಲ್ಲ. ಈ ಗಲಭೆಗಳಿಗೆ ಪುಂಡರು ಕಾರಣರು. ಸದ್ಯದ ಜಾತೀಯ ದ್ವೇಷದ ಸಂಧಿಯನ್ನು ಸಾಧಿಸಿ ಈ ಪುಂಡರು ಸ್ಥಳಿಕ ಮುಸಲ್ಮಾನ ಉಡಾಳರೊಡನೆ ಗುಂಪುಗೂಡಿ ಈ ಅತ್ಯಾಚಾರವನ್ನು ನಡೆಸುತ್ತಿರುವರು.

ಸ್ತ್ರೀಯರ ಅಪಹರಣದ ನಿಶ್ಚಿತ ಸಂಖ್ಯೆ ನಮಗೆ ತಿಳಿದಿಲ್ಲ. ಮಾರ್ಗ ಮುಂತಾದವುಗಳು ನಾಶಹೊಂದಿ ಸಂಪರ್ಕಗಳು ಕುಸಿದು ಬಿದ್ದಿರುವದರಿಂದ ಕಾಯದೆ ಸುವ್ಯವಸ್ಥೆಯನ್ನು ಕಾಪಾಡುವದಾಗಿಲ್ಲ. ದಂಗೆಗಾರರೊಡನೆ ಸಂಪರ್ಕ ಬೆಳೆಸುವದು ಕಷ್ಟಸಾಧ್ಯವಾಗಿದೆ. ಆಸ್ತಿ ಹಾನಿ ವಿಶೇಷವಾಗಿರಬಹುದು. ೫೦೦೦ ಜನ ಈ ಭಾಗದಲ್ಲಿ ಸತ್ತಿರುವರೆಂಬುದು ಅತಿಶಯೋಕ್ತಿ ಎಂಬಲ್ಲಿ ಸಂದೇಹವಿಲ್ಲ. ಅದಕ್ಕೆನನ್ನಲ್ಲಿ ಸಾಕಷ್ಟು ಆಧಾರಗಳಿವೆ. ಎಂದು ಮುಂತಾಗಿ ಹೇಳಿ ಪರಿಹಾರ ಕಾರ್ಯ ಕೈಕೊಳ್ಳಲಾಗಿದೆ. ಗಲಭೆಗಳು ಹಬ್ಬದಂತೆ ಮತ್ತು ಪರಿಸ್ಥಿತಿಯನ್ನು ಹಿಡಿತದಲ್ಲಿ ತರುವಂತೆ ವ್ಯವಸ್ಥೆ ಮಾಡಲಾಗಿದೆಂದು ವರದಿ ಕಳಿಸಿರುವರು.

## ಗವರ್ನರರ ಹೇಳಿಕೆಯ ಖಂಡನೆ

ಬಂಗಾಲದ ಪ್ರಮುಖರೂ ನಡುಗಾಲ ಸರಕಾರದ ಮಂತ್ರಿಗಳೂ ಆಗಿದ್ದ ಶರಚ್ಚಂದ್ರ ಬೋಸರು ಒಂದು ಪ್ರಕಟನೆಯಲ್ಲಿ ಸತ್ತವರ ಸಂಖ್ಯೆ ಮೂರಂಕಿಯನ್ನು ಮೀರಿಲ್ಲ ಎಂಬ ಗವರ್ನರರ ಹೇಳಿಕೆಯನ್ನು ಖಂಡಿಸಿ ಅದು ನಾಲ್ಕನೆ ಅಂಕಿಗಳನ್ನೂ ಮೀರುತ್ತದೆಂದು ಹೇಳಿರುವರು. ಪೂರ್ವಬಂಗಾಲದ ಪರಿಸ್ಥಿತಿಯನ್ನು ಕಡಿಮೆಮಾಡಿ ತೋರಿಸಲು ಗವರ್ನರರು ಪ್ರಯತ್ನಿಸಿದ್ದಾರೆ. ನೌಖಾಲಿ ಮತ್ತು ತಿಪ್ಪೇರಾ ಜಿಲ್ಹೆಗಳಲ್ಲಿ ಮುಸಲ್ಮಾನರು ಹಿಂದುಗಳ ವಿರುದ್ಧ ಸಾಮೂಹಿಕವಾಗಿ ದಂಗೆ ಹೂಡಿರುವರೆಂಬಲ್ಲಿ ತಿಲಮಾತ್ರ ಸಂಶಯವಿಲ್ಲ. ಸತ್ತವರ ಸಂಖ್ಯೆ ಮೂರರ ಅಂಕಿಗಳನ್ನು ಮೀರಿಲ್ಲೆಂದು ಗವರ್ನರರು ಯಾವ ಆಧಾರದ ಮೇಲೆ ಹೇಳಿರುವರೊ ತಿಳಿಯದು. ಅನೇಕರು ಪೋಲೀಸರ ಸಹಾಯ ಕೇಳಿದಾಗ್ಯೂ ಸಕಾಲಕ್ಕೆ ಒದಗಿಸಲಿಲ್ಲ. ಹಿಂದಿನ ಓರ್ವ ಎಂ ಎಲ್ ಎ ನ ನೇತೃತ್ವದಲ್ಲಿ ವಿಸರ್ಜಿತ ಸೈನಿಕರೂ ಇತರರೂ ಸೇರಿ ಈ ದಂಗೆಯನ್ನು ಸಂಘಟಿತ ರೀತಿಯಿಂದ ಹೂಡಿದ್ದಾರೆ. ಈ ಬಗ್ಗೆ ಪೂರ್ವ ಸಿದ್ಧತೆ ಬಗ್ಗೆ ಮೊದಲೆ ಸೂಚನೆ ಕೊಟ್ಟದ್ದರೂ ಅವರು ಆ ಯಾವದೇ ಉಪಾಯ ಕೈಕೊಳ್ಳಲಿಲ್ಲ. ೧೯–೨೦ನೇ ತಾರೀಕು ನಾನು ವಿಮಾನದಲ್ಲಿ ಪೀಡಿತ ಪ್ರದೇಶಗಳ ಮೇಲೆ ಸಂಚರಿಸಿದಾಗ ೧೫– ೨೦ ಹಳ್ಳಿಗಳಲ್ಲಿ ಬೆಂಕಿ ಧಗಧಗಿಸುತಿದ್ದುದು ಕಂಡುಬಂತು. ಸುದ್ದಿ ಸಂಪರ್ಕವಿಲ್ಲೆಂದು ಗವರ್ನರರು ಹೇಳಿರುತ್ತಾರೆ. ಇದು ದಂಗೆಗಾರರಿಗೂ ಅನ್ವಯಿಸುತ್ತದೆಯಷ್ಟೆ. ಈ ಅನುಕೂಲತೆಯಿಲ್ಲದಿದ್ದರೂ ದಂಗೆಗಾರರು ಹಳ್ಳಿಯಿಂದ ಹಳ್ಳಿಗೆ ಹೋಗಿ ಕೊಲೆ ಸುಲಿಗೆ ಮಾಡುವದಕ್ಕೆ ಅಡ್ಡಿಯಾಗಿಲ್ಲ. ಪೋಲೀಸರು ಮತ್ತು ಸೈನಿಕರು ಮಾತ್ರ ಅವರನ್ನು ತಡೆಗಟ್ಟಲು ಸಮರ್ಥರಾಗಿಲ್ಲ.

## ಸತ್ಯ ಮುಚ್ಚಿಡುವ ಕುಚೋದ್ಯ

ಡಾ. ಶ್ಯಾಮ ಪ್ರಸಾದ ಮುಕರ್ಜಿಯವರೂ ಇದರಂತೆ ಪ್ರಕಟನೆ ಹೊರಡಿಸಿ 'ಈ ವರದಿ' ಸತ್ಯವನ್ನು ಮುಚ್ಚಿಡುವ ಕುಚೋದ್ಯವೆಂದು ಹೇಳಿರುವರು. ನೌಖಾಲಿಯ ಭೀಷಣ ಅತ್ಯಾಚಾರಗಳನ್ನು ಮುಚ್ಚಿಟ್ಟು ಸತ್ಯ ಸಂಗತಿಗಳ ಯಥಾರ್ಥ ವರದಿಯನ್ನು ಅವರು ಮಾಡಲಿಲ್ಲ. ನಾನು ಗಲಭೆ ಪ್ರದೇಶದ ಎಷ್ಟೋ ಜನರನ್ನು ಕಂಡು ಮಾತಾಡಿಸಿದ್ದೇವೆ. ಗಲಭೆಯಲ್ಲಿ ಕೊಂದ, ಮತ್ತು ಸಜೀವ ಮನುಷ್ಯರನ್ನು ಸುಟ್ಟ ಸಂಖ್ಯೆ ಎಷ್ಟೋ ಸಾವಿರದ ವರೆಗಿದೆಂದು ನನಗೆ ಮನದಟ್ಟಾಗಿದೆ. ಸ್ಥಾನಿಕ ಜಮೀನದಾರನ ಒಂದೇ ಒಂದು ಮನೆಯಲ್ಲಿ ೪೦೦ ಜನರನ್ನು ಕಡಿದು ಹಾಕಲಾಯಿತೆಂದು ಕಣ್ಣಾರೆಕಂಡನನೊಬ್ಬನು ಹೇಳಿದ ವರದಿ ನನಗೆ ಬಂದಿದೆ. ಈ ಗಲಭೆ ಕೇವಲ ಪುಂಡರ ಕೃತ್ಯಗಳಲ್ಲ. ಒಂದು ಪಕ್ಷದವರು ಎರಡನೆ ಪಕ್ಷದವರ ಮೇಲೆ ತಮ್ಮ ವಿಚಾರಗಳನ್ನು ಹೇರಲು ನಿರ್ಧರಿಸಿ ತಕ್ಕಸಿದ್ಧತೆಗಳನ್ನು ಮಾಡಿದ್ದಾಗಿದೆ. ಮತಾಂತರ ಸ್ತ್ರೀ ಅಪಹಾರಗಳಬಗ್ಗೆ ಬೇಕಾದಷ್ಟು ಪುರಾವೆಗಳು ಸಿಕ್ಕುತ್ತವೆ. ಆದರೆ ಕೇವಲ ವಿಮಾನಗಳಲ್ಲಿ ಸಂಚರಿಸಿದರೆ ಅವು ಹೇಗೆ ದೊರೆಯಬೇಕು? ಜನರೊಡನೆ ಸಂಪರ್ಕ ಬೆಳಸಿಕೊಂಡರೆ ಮಾತ್ರ ಈ ವಿಷಯದ ಸತ್ಯ ಸಂಗತಿಗಳು ತಿಳಿದುಬರುವವು.

ಪೇಶಾವರದಿಂದ ಬಂದ ಮವಾಲಿಗಳು ಈ ದೊಂಬಿ ಹಾಕುತ್ತಿರುವರೆಂದು ತಿಳಿಯುತ್ತದೆ. ಕೊಲೆ ಸುಲಿಗೆ ಮಾನಭಂಗ ಮೊದಲಾದವುಗಳಿಗೆ ಇವರು ಪುಂಡರನ್ನು ಪ್ರಚೋದಿಸುತ್ತಾರೆ ಎಂಬುದಾಗಿ ಓರ್ವರು ತಿಳಿಸುತ್ತಾರೆ. ಹಿಂದುಗಳನ್ನು ಒತ್ತಾಯದಿಂದ ಮತಾಂತರ ಗೊಳಿಸಿದ ಬಳಿಕ ಇವರಿಗೆ ಹೊರಗೆ ಹೋಗಲು ಅಪ್ಪಣೆ ಚೀಟಿ ಕೊಡಲಾಗುತ್ತದೆ.

ಬೇಗಮಗಂಜ ಪೋಲೀಸ ಸ್ಟೇಶನದ ಹದ್ದಿಯ ಒಂದು ಹಳ್ಳಿಯ ಶ್ರೀ ಬೀರತ್ರನಾಥ ರಾಯ ಇವರನ್ನು ಪುಂಡರಿಂದ ಉಳಿಸಿಕೊಂಡು ಕೊಮಿಲ್ಲಾಕ್ಕೆ ತರಲಾಗಿದೆ. ಅವರು ತಮ್ಮ ಹಳ್ಳಿಯಲ್ಲಿ ಅತ್ಯಾಚಾರಗಳನ್ನಿಂತು ಬಣ್ಣಿಸುತ್ತಾರೆ.

ಪುಂಡರು ಭಯಂಕರವಾದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಬಂದು ಎಷ್ಟೋ ಮನೆಗಳನ್ನು ಲೂಟಿ ಮಾಡಿ ಸುಟ್ಟರು. ಮನೆಗಳಲ್ಲಿರುವ ಗಂಡಸರನ್ನೆಲ್ಲ ಕೈಕಾಲು ಕಟ್ಟಿ ಒಂದು ಗುಡಿಸಲಿನಲ್ಲಿ ಒಗೆದು ಅದಕ್ಕೆ ಬೆಂಕಿ ಹಚ್ಚಿ ೨೭ ಸಜೀವ ಮನುಷ್ಯರನ್ನು ಸುಟ್ಟರು. ಆ ಊರಿನಿಂದ ಓಡಿ ಹೋದ ಜನ ಅಡವಿಯಲ್ಲಿ ಸುತ್ತಲಿನ ಹಳ್ಳಿಗಳಲ್ಲಿ ಆಶ್ರಯ ಪಡೆದಿರುವರು. ಈ ಗಂಜದ ಇನ್ನೊಂದು ಹಳ್ಳಿಯಿಂದ ಪೋಲೀಸರು ಸುಮಾರು ೩೧ ಹೆಣ್ಣುಮಕ್ಕಳು ಮತ್ತು ಬಾಲಕರನ್ನು ಪುಂಡರಿಂದ ಉಳಿಸಿಕೊಂಡಿರುತ್ತಾರೆ.

ನೌಖಾಲಿಯಂತೆ ಚಾಂದಪೂರ ಜಿಲ್ಹೆಯ ಕೆಲ ಭಾಗಗಳಿಗೂ ಅತ್ಯಾಚಾರ ಹಬ್ಬಿದೆ. ಹಗಲು ಹಾಡೇ ದರೋಡೆಗಳು ನಡೆದಿವೆ. ಕೊಳ್ಳೆಗಳು ನಡೆದಿವೆ. ಸಣ್ಣಸಣ್ಣ ಗುಂಪುಗಳಲ್ಲಿ ಪುಂಡರೀಗ ದಾಳಿ ನಡೆಸಿದ್ದಾರೆ. ಇಂತಿಷ್ಟು ದಿನಗಳಲ್ಲಿ ಧರ್ಮಾಂತರ ಹೊಂದದಿದ್ದರೆ ನಾವು ನಿಮ್ಮನ್ನು ಸಮೂಲ ನಾಶ ಮಾಡುವೆವು ಎಂದು ಬೆದರಿಕೆ ಹಾಕಿ ಹಣ ಕಿತ್ತಿಕೊಂಡು ಹೋಗುತಿರುವರು.

ರಾಮಗಂಜ ಠಾಣೆಯ ಎಷ್ಟೋ ಹಳ್ಳಿಗಳಲ್ಲಿ ಹಿಂದೂ ಜನರ ಎಲ್ಲ ಸ್ಥಾವರ ಆಸ್ತಿಯನ್ನು ಲೂಟಿ ಮಾಡಿದ್ದಾರೆ. ಎಷ್ಟೋ ಗಂಡಸರನ್ನು ಕೊಂದು ಅವರ ಹೆಣಗಳನ್ನು ಸುಡುವ ಮನೆಗಳ ಉರಿಯಲ್ಲಿ ಚೆಲ್ಲಿಕೊಟ್ಟಿದ್ದಾರೆ. ಸ್ತ್ರೀಯರ ಮೇಲೆ ಬಲಾತ್ಕಾರ ನಡೆದೇ ಇದೆ. ಎಷ್ಟೋ ಜನರನ್ನು ಒತ್ತಾಯದಿಂದ ಧರ್ಮಾಂತರಗೊಳಿಸಿದ್ದಾರೆ, ಎಂದು ಮುಂತಾಗಿ ಓರ್ವರು ಡಾ. ಶ್ಯಾಮಪ್ರಸಾದ ಮುಕರ್ಜಿಯವರಿಗೆ ತಿಳಿಸಿದ್ದಾರೆ.

## ಮಾನರಕ್ಷಣೆಗಾಗಿ ಅಗ್ನಿಪ್ರವೇಶ

ನೌಖಾಲಿಯಿಂದ ಪಾರಾಗಿ ಬಂದ ಅನೇಕ ಸ್ತ್ರೀಯರು ಮಾನರಕ್ಷಣೆಗಾಗಿ ಅಗ್ನಿಪ್ರವೇಶ ಮಾಡಿರುವರು. ಕೆಲವರು ಆತ್ಮಹತ್ಯೆ ಮಾಡಿಕೊಂಡರು. ಕೆಲವರು ವಿಷಪಾನ ಮಾಡಿದರು ಎಂದು ಹಿಂದುಸ್ತಾನ ಸ್ಟಾಂಡರ್ಡ ಪತ್ರಿಕೆಗೆ ಶಿಲಾಂಗದಿಂದ ಸುದ್ದಿ ಬಂದಿದೆ. ರಜಪೂತ ಸ್ತ್ರೀಯರಂತೆ ಇವರು ಜೋಹಾರವನ್ನು ಆಚರಿಸಿದರು.

## ಘೋರ ದೃಶ್ಯ

ಕಾಂಗ್ರೆಸ ಅಧ್ಯಕ್ಷ ಆಚಾರ್ಯ ಕೃಪಲಾಣಿಯವರು ಪೀಡಿತ ಭಾಗಗಳನ್ನು ಸಂದರ್ಶಿಸಿ ಬಂದ ನಂತರ 'ಘೋರ ದೃಶ್ಯ' ಎಂದು ಉಸುರ್ಗರೆದರು. ಇವರೊಡನೆ ಸಂಚರಿಸಿದ ಬಂಗಾಲ ಪತ್ರಿಕಾ ಸಮಿತಿಯ ಪ್ರತಿನಿಧಿಯ ಅಭಿಪ್ರಾಯ ಇಂತಿದೆ....... ನಮ್ಮ ವಿಮಾನ ತೀರ ಸ್ವಲ್ಪ ಅಂತರದಲ್ಲಿ ಹಾರಿ ಹೋಗುತಿತ್ತು. ಆಗ ನಮಗೆ ಮಳೆಯಿಂದ ಹಸರು ಬಣ್ಣದ ಶಾಲು ಹೊದ್ದಂತೆ ಭೂಮಿ ಕಂಗೊಳಿಸುತಿತ್ತು. ಇಂಥ ಹಚ್ಚನೆ ನೆಲದ ಮಧ್ಯದಲ್ಲಿ ಧಗಧಗ ಉರಿಯುವ ಹೊಗೆಯಿಂದ ತುಂಬಿದ ಹಳ್ಳಿಗಳ ಅಸಹ್ಯನಾದ ದೃಶ್ಯಗಳನ್ನು ನೋಡಿದೆವು. ಬೆಂಕಿ ಹತ್ತಿ ಉರಿಯುವ ಹಳ್ಳಿಗಳಿಂದ ಜನರು ಓಡಿಹೋಗುತ್ತಿರುವ ದೃಶ್ಯ ನೋಡಿ ಕಲ್ಲೆದೆ ಕೂಡ ಕರಗುವಂತಿತ್ತು. ಶಕ್ಯವಿದ್ದರೆ ನಾವು ಅಲ್ಲಿಯೆ ಇಳಿದು ಆ ಜನರಿಗೆ ನಮಗೆ ಶಕ್ಯವಿದ್ದ ಸಹಾಯ ಕೊಡಬೇಕೆಂದೆನಿಸಿತು. ಎಷ್ಟೋ ಹಳ್ಳಿಗಳು ಅಗ್ನಿಗಾಹುತಿ ಆಗಿರದಿದ್ದರೂ ಅಲ್ಲಿ ಸಜೀವ ಪ್ರಾಣಿ ಇದ್ದಂತೆ ಚಟುವಟಿಕೆಗಳೂ ಇರಲಿಲ್ಲ. ಈ ಪುಂಡರ ದಾಳಿಯಿಂದ ಜನರೆಲ್ಲ ಕಂಗೆಟ್ಟಿದ್ದರು. ಪರಚಕ್ರ ದಾಳಿಗಿಂತಲೂ ಇದು ಭೀಕರವಾಗಿದೆ. ಏಕೆಂದರೆ ವಿದೇಶಿಯ ಸೈನಿಕರು ಸ್ತ್ರೀ ಅಪಹಾರ ಧರ್ಮಾಂತರ, ಪವಿತ್ರ ಸ್ಥಳಗಳನ್ನು ಅಪವಿತ್ರಮಾಡುವ ನೀಚ ಕೆಲಸಗಳಲ್ಲಿ ಸಹಸಾ ತೊಡಗುವದಿಲ್ಲ.

ಈ ಘಟನೆಗಳನ್ನು 'ಪುಂಡಾಟಿಕೆ' ಅಥವಾ ಜಾತೀಯ ಗಲಭೆ ಎಂದು ಹೇಳುವದು ಸರಿಯಾಗಲಾರದು. ಅಲ್ಪಸಂಖ್ಯಾಕರ ಮೇಲೆ ಬಹುಸಂಖ್ಯಾಕರು ತಮ್ಮ ರಾಜಕೀಯ ಪಕ್ಷದ ಹೆಸರಿನಲ್ಲಿ ಸಾರಿದ ಯುದ್ಧವೆ ಇದಾಗಿದೆ. ಇಲ್ಲಿಯ ಅಲ್ಪಸಂಖ್ಯಾಕರಿಗೆ ಧರ್ಮಾಂತರಕ್ಕೆ ಒಪ್ಪುವದು ಇಲ್ಲವೆ ಮರಣಕ್ಕೆ ಸಿದ್ಧರಾಗುವದು ಅಥವಾ ಶಕ್ಯವಿದ್ದರೆ ಓಡಿ ಹೋಗುವದು ಈ ಮೂರೇ ಮಾರ್ಗಗಳುಳಿದಿವೆ. ಅಲ್ಪಸಂಖ್ಯಾಕರ ಸಮಾಜಕ್ಕೆ ಸಮಾಜವೇ ನಾಮಶೇಷವಾಗುವ ಪರಿಸ್ಥಿತಿ ಇಂದಿಗೂ ಹಾಗೆಯೇ ಇದೆ. ಸರಕಾರ ಮೂಲೆಗುಂಪಾಗಿದೆ. ಅದರ ಅಡಳಿತ ಸೂತ್ರಗಳೆಲ್ಲ ಕಳಚಿ ಬಿದ್ದಿವೆ. ಇಲ್ಲದಿದ್ದರೆ ಪುಂಡಾಟಿಕೆ ನಡೆಸಿದ ತಂಡಗಳಿಗೆ ಸರಕಾರ ಇನ್ನೂ ಇದೆ ಎಂಬ ಕಲ್ಪನೆ ಇಷ್ಟರಲ್ಲಿ ಬರಬೇಕಿತ್ತು.

## ಪುಂಡಾಟಿಕೆ ನಡೆಸುವರೆಂತು?

ಪುಂಡರೆ ಎಲ್ಲವನ್ನು ಮಾಡುತಿರುವರೆಂದು ಹೇಳುವದು ಸಮಂಜಸವಾಗದು. ಅವರು ಸ್ಥಾನಿಕ ಮುಖಂಡರು ತೋರಿಸಿದ ಸ್ಥಳಗಳಿಗೆ ಹೋಗಿ ವಿಧ್ವಂಸನ ಕಾರ್ಯದಲ್ಲಿ ನೆರವಾಗುತಿರುವರು. ಅಲ್ಲಿ ನಡೆದ ವಿನಾಶಕ ಕಾರ್ಯಗಳ ರೀತಿನೀತಿಗಳನ್ನು ಆಳವಾಗಿ ನೋಡಿದರೆ ಸಂಘಟಿತ ರೂಪದಲ್ಲಿ ಕೇಂದ್ರ ಸಂಸ್ಥೆಯ ಸೂಚನೆಗಳಂತೆ ಎಲ್ಲ ವಿಧ್ವಂಸಕ ಕೃತ್ಯಗಳು ನಡೆದಿವೆಎಂದು ಕಂಡು ಬರುವದು. ಈ ವರೆಗೆ ತಿಳಿದುಬಂದುದೇನೆಂದರೆ ಸಮವಸ್ತ್ರ ಧರಿಸಿದ ಪಠಾಣರ ತಂಡಗಳು ತಮ್ಮ ರಟ್ಟೆಯ ಮೇಲೆ ಗುರ್ತಿಗಾಗಿ ಒಂದು ಪಟ್ಟಿ ಕಟ್ಟಿದವರು ಜಲಮಾರ್ಗದಿಂದಲೂ ನಾವೆಗಳಿಂದಲೂ ತಮ್ಮ ಸಂಗಡ ಸಾಕಷ್ಟು ಅನ್ನ ಸಾಮಗ್ರಿ ಮತ್ತು ಇತರ ವಿಧ್ವಂಸಕ ಸಲಕರಣೆಗಳನ್ನು ತಕ್ಕೊಂಡು ಸಣ್ಣದೊಡ್ಡ ಗುಂಪುಗಳಲ್ಲಿ ಗೊತ್ತುಮಾಡಿದ ಸ್ಥಳಗಳಲ್ಲಿಗೆ ಹೋಗಿ ಈ ಕೃತ್ಯಗಳನ್ನೆಸಗುವರು. ಬೇರೆ ಬೇರೆ ತಂಡಗಳು ಬೇರೆ ಬೇರೆ ಕಾರ್ಯಗಳಲ್ಲಿ ತೊಡಗುವರು. ಪೆಟ್ರೋಲನ್ನು ಕಾರಿನಿಂದ ತುಳಿಯುವ ಪಂಪುಗಳಿಂದ ಮನೆಗಳಿಗೆಲ್ಲ ಸಿಂಪಡಿಸಿ ಬೆಂಕಿ ಹಚ್ಚುವದನ್ನು ನೋಡಿದರೆ ಇಂಥ ದಿನಗಳಲ್ಲಿ ಇಷ್ಟೊಂದು ಪೆಟ್ರೋಲಾದರೂ ಇವರಿಗೆ ಎಲ್ಲಿಂದ ಸಿಕ್ಕಿತೆಂಬುದು ಆಶ್ಚರ್ಯವನ್ನುಂಟು ಮಾಡದಿರದು. ೨೩ ನೇ ತಾರೀಕಿನ ದಿವಸ ಪ್ರಸಿದ್ಧವಾದ ಈ ವರದಿಯಲ್ಲಿ ದಂಗೆಯಿನ್ನೂ ಹಬ್ಬುತಿದೆಯೆಂದು ಉಲ್ಲೇಖಿಸಲಾಗಿದೆ.

## ಆಚಾರ್ಯ ಕೃಪಲಾಣಿಯ ಪ್ರಕಟಣೆ

ಆಚಾರ್ಯ ಕೃಪಲಾಣಿಯವರು ಆರು ದಿನಗಳ ವರೆಗೆ ಈ ಪ್ರದೇಶದಲ್ಲಿ ಸಂಚರಿಸಿ ಮರಳಿ ಕಲಕತ್ತೆಗೆ ಬಂದ ನಂತರ ಸುದ್ದಿಗಾರರ ಸಭೆಯಲ್ಲಿ ತಾವು ಈ ಗಲಭೆಗಳ ಸಂಬಂಧದಲ್ಲಿ ಮಾಡಿಕೊಂಡ ನಿರ್ಣಯಗಳನ್ನು ವಿವರಿಸಿದರು. ೧) ಆ [illegible]ಗದ ಮುಸಲ್ಮಾನರು ಹಿಂದುಗಳ ಮೇಲೆ ದಾ[illegible] ಮಾಡಲು ಪೂರ್ವಸಿದ್ಧತೆ ನಡೆಸಿದ್ದರು. ಇದಕ್ಕೆ ಮುಸ್ಲಿಂ ಲೀಗಿನವರು ಕಾರಣರಲ್ಲದಿದ್ದರೂ ಇದನ್ನು ಬೇಕೆಂದೇ ಕೈಕೊಳ್ಳಲಾಗಿದೆ. ಇವು ಮುಸ್ಲಿಂ ಲೀಗ ಪ್ರಚಾರದ ಪರಿಣಾಮವೆಂಬಲ್ಲಿ ಸಂಶಯವಿಲ್ಲ. ಪ್ರಮುಖ ಮುಸ್ಲಿಂಲೀಗ ಧುರೀಣರು ಇವಕ್ಕೆ ಪ್ರೋತ್ಸಾಹ ಕೊಡುತಿದ್ದಾರೆಂಬದಕ್ಕೆ ಸಾಕಷ್ಟು ಆಧಾರಗಳಿವೆ. ೨) ಅಧಿಕಾರಿಗಳಿಗೆ ಈ ಬಗ್ಗೆ ಮೊದಲೆ ಎಚ್ಚರಿಕೆ ಕೊಡಲಾಗಿತ್ತು. ೩) ಈ ದಾಳಿ ಮಾಡಲು ಮುಸ್ಲಿಂ ಅಧಿಕಾರಿಗಳು ಕೂಡಿ ಒಳಸಂಚು ನಡೆಸಿದ್ದರು. ಕೆಲವರು ಇದಕ್ಕೆ ಪ್ರೋತ್ಸಾಹ ಕೊಟ್ಟರು. ಹಿಂದುಗಳ ಮೇಲೆ ಎಷ್ಟೇ ಅತ್ಯಾಚಾರ ನಡೆಸಿದರೂ ಸರಕಾರ ಯಾರನ್ನೂ ದಂಡಿಸುವದಿಲ್ಲೆಂಬ ನಂಬಿಕೆಯಿತ್ತು. ೪) ಮುಸಲ್ಮಾನರು ನೂರಾರ ತಂಡುಗಳನ್ನು ಕಟ್ಟಿಕೊಂಡು ಈ ದಾಳಿ ಮಾಡುತ್ತಿದ್ದರು. ಮುಸ್ಲಿಂ ಲೀಗಿಗೂ ಕಲಕತಾ ಅತ್ಯಾಚಾರಕ್ಕೊಳಗಾದವರಬಗ್ಗೆಯೂ ಮೊದಲು ಧನಸಹಾಯ ಬೇಡುತಿದ್ದರು. ೧೫೦೦೦ ರೂಪಾಯಿಗಳ ವರೆಗೂ ಒತ್ತಾಯದಿಂದ ಹಣವನ್ನು ಸೆಳೆದುಕೊಂಡ ಉದಾಹರಣೆಗಳಿವೆ. [illegible] ಕೊಟ್ಟ ಬಳಿಕವೂ ಅವರ ಕಾಟ ತಪ್ಪುತಿರ[illegible] ಮನೆಗಳನ್ನು ಮುತ್ತಿ ಸಾಮಾನಗಳನ್ನೆಲ್ಲ ದೋ[illegible] ಕೊಂಡು ಹೋಗುತಿದ್ದರು. ಹಲವಡೆ ದನಕರುಗಳನ್ನು ಒಯ್ದದ್ದುಂಟು. ಒಂದೊಂದು ಸಲ ಲೂಟಿಯಮೊದಲು ಆ ಮನೆಯವರಿಗೆ ಇಸ್ಲಾಮ ಧರ್ಮ ಸ್ವೀಕರಿಸಲು ಒತ್ತಾಯ ಪಡಿಸುತ್ತಿದ್ದರು. ಆ ಧರ್ಮವನ್ನು ಸ್ವೀಕರಿಸಿದರೂ ಸುಲಿಗೆಯೇನು ತಪ್ಪುತಿರಲಿಲ್ಲ. 'ಮುಸ್ಲಿಂಲೀಗ ಝಿಂದಾಬಾದ' 'ಲಢಕೆ ಲೇಂಗೆ ಪಾಕಿಸ್ತಾನ' ಎಂಬ ವಿಜಯ ಘೋಷಗಳನ್ನು ಅವರು ಮಾಡುತಿದ್ದರು. ಕಲಕತ್ತೆಯ ಹತ್ಯಾಕಾಂಡದಲ್ಲಿ ಮಡಿದ ಮುಸಲ್ಮಾನರ ಸೇಡು ತೀರಿಸಿಕೊಳ್ಳುವದಕ್ಕಾಗಿ ಇದನ್ನು ಮಾಡುತಿದ್ದೇವೆಂದು ಅವರು ಹಿಂದುಗಳಿಗೆ ಹೇಳುತಿದ್ದರು. ಪ್ರತಿಭಟಿಸಿದವರನ್ನು ನಿಷ್ಕರುಣೆಯಿಂದ ನಡೆಸಿಕೊಳ್ಳುತಿದ್ದರು. ಗುಂಡಿಕ್ಕಿ ಕೊಲ್ಲುತಿದ್ದರು. ಈ ಬಂದೂಕು[illegible] ಮುಸಲ್ಮಾನ ಜಮೀನದಾರರವು. ಅಥವಾ ಸುಲಿಗೆಗೊಳಗಾದ ಹಿಂದುಗಳವು. ಕೊಲ್ಲಲ್ಪಟ್ಟವರ ಸಂಖ್ಯೆ ಈ ಅಲ್ಪಾವಧಿಯಲ್ಲಿ ನನಗೆ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಈ ಗಲಭೆಗಳಲ್ಲಿ ನೂರುಜನ ಸತ್ತರೆಂದು ಒಬ್ಬ ಅಧಿಕಾರಿ ನನಗೆ ತಿಳಿಸಿದ. ಇನ್ನೊಬ್ಬ ಉಚ್ಚ ಅಧಿಕಾರಿ ೫೦೦ ಜನ ಸತ್ತರೆಂದು ಹೇಳಿದ. ೫) ದಿತಿಯಾಪುರದ ಸಮೀಪದಲ್ಲಿಯೆ ೩೦೦ ಜನ ಸತ್ತಿರಬಹುದೆಂದು ವಿಚಾರಣೆಯಲ್ಲಿ ತಿಳಿಯಿತು. ಸತ್ತವರ ಹೆಸರು ನನ್ನ ಬಳಿ ಇವೆ. ಕೆಲ ಕುಟುಂಬಗಳಲ್ಲಿ ೪೦—೫೦ ಜನರನ್ನು ಕೊಂದ ಬಗ್ಗೆ ನನ್ನಲ್ಲಿ ಆಧಾರಗಳಿವೆ.

೬) ಈ ಅತ್ಯಾಚಾರಕ್ಕಾಗಿ ದೂರದ ಪ್ರಾಂತಗಳಿಂದ ಬಂದವರು ವಿರಳ. ಇದರಲ್ಲಿ ಭಾಗವಹಿಸಿದವರು ನೆರೆಹೊರೆಯ ಮುಸ್ಲಿಂ ಹಳ್ಳಿಗ[illegible]ವರು. ಮಿಶ್ರ ಜನವಸತಿಯುಳ್ಳ ಗ್ರಾಮ[illegible] ಆ ಗ್ರಾಮದ ಮುಸಲ್ಮಾನರೂ ಭಾಗವಹಿಸುತಿದ್ದರು. ಅನೇಕ ಅತ್ಯಾಚಾರಿಗಳನ್ನು ಪೀಡಿತರು ಈಗಲೂ ಗುರುತಿಸಬಲ್ಲರು. ಅವರವರ ಯಾದಿಗಳನ್ನು ನನ್ನ ವಶಪಡಿಸಲಾಗಿದೆ.

೭) ಅನೇಕ ಹಿಂದುಗಳು ಜೀವದ್ದಾಸೆಗಾಗಿ ಮುಸಲ್ಮಾನ ಧರ್ಮವನ್ನು ಒತ್ತಾಯದಿಂದ ಸ್ವೀಕರಿಸಿರುವರು. ಇವರಿಗೆಲ್ಲ ಬಿಳಿ ಟೊಪ್ಪಿಗೆಗಳನ್ನು ಕೊಡಲಾಗುತಿದ್ದು ಅದರ ಮೇಲೆ ಪಾಕಿಸ್ತಾನದ ನಕ್ಷೆ ಹಾಗು 'ಪಾಕಿಸ್ತಾನ ಝಿಂದಾಬಾದ' ಲಢಕೆ

—೬ನೇ ಪುಟಕ್ಕೆ



## ಧಾರವಾಡ ಜಿಲ್ಹಾ ಸಾಹಿತ್ಯ ಸಮ್ಮೇಲನ

ಧಾರವಾಡ ಜಿಲ್ಹಾ ಆರನೇ ಸಾಹಿತ್ಯ ಸಮ್ಮೇಲನ ಹುಬ್ಬಳ್ಳಿಯಲ್ಲಿ ಕಳೆದ ೨೭—೨೮—೨೯ ಈ ಮೂರುದಿನ ಸಾಂಗವಾಯಿತು ಇದರ ಅಂಗವಾಗಿ ಗದ್ಯ—ಪದ್ಯ ಗೋಷ್ಠಿ, ವಿಜ್ಞಾನ ಗೋಷ್ಠಿ ಮಹಿಳಾ ಗೋಷ್ಠಿ, ಮಕ್ಕಳ ಕೂಟಗಳನ್ನೂ ಏರ್ಪಡಿಸಿದ್ದರು. ಮುಂಬಯಿ ಸರಕಾರದ ಉಪಮಂತ್ರಿಗಳಾದ ಶ್ರೀ ಪಾಟೀಲ ಕಲ್ಲನಗೌಡರು ಸಮ್ಮೇಳನದ ಉದ್ಘಾಟನ ಮಾಡುತ್ತ ಸದ್ಯದ ರಾಜಕೀಯ ಪರಿಸ್ಥಿತಿ, ಕರ್ನಾಟಕ ಪ್ರಾಂತೀಕರಣ ಸಮಸ್ಯೆ, ಈ ಸಮಯದಲ್ಲಿ ಸಾಹಿತಿಗಳು ಮಾಡತಕ್ಕ ಕರ್ತವ್ಯ ಮೊದಲಾದದ್ದನ್ನು ಸ್ಪಷ್ಟವಾಗಿ ವಿವರಿಸಿದರು. ಹಿಂದುಸ್ತಾನದ ಸ್ವಾತಂತ್ರ್ಯ ಸಮೀಪಿಸಿರುವ ಈ ಸಮಯದಲ್ಲಿ ಕರ್ನಾಟಕ ಪ್ರಾಂತ ನಾವು ಎಣಿಸಿದ್ದಕ್ಕಿಂತ ಮೊದಲೆ ಬರಬಹುದು. ಅದಕ್ಕಾಗಿ ನಾವು ಸಂಪೂರ್ಣ ಸಿದ್ಧರಾಗಬೇಕು. ವಿಶ್ವವಿದ್ಯಾಲಯವೂ ಬೇಗನೆ ಸ್ಥಾಪಿತವಾಗಲಿದೆ. ಅದಕ್ಕೂ ನಾವು ಸಿದ್ಧರಾಗಬೇಕು. ಸಾಹಿತಿಗಳು ಕೇವಲ ಕತೆ ಕಾದಂಬರಿ ಕವಿತೆಗಳನ್ನು ಬರೆಯುವಲ್ಲಿಯೇ ವೇಳೆ ಕಳೆಯದೆ ನಾಡಿನ ಸರ್ವಾಂಗಿಕ ಉನ್ನತಿಗೆ ಸಾಧಕವಾದ ಸಾಹಿತ್ಯವನ್ನು ನಿರ್ಮಿಸಬೇಕೆಂದು ಹೇಳಿದರು. ಅಧ್ಯಕ್ಷ ಅ. ನ. ಕೃಷ್ಣರಾಯರು ಪ್ರಗತಿಶೀಲ ಸಾಹಿತ್ಯದ ಪ್ರಚಾರ ಮಾಡಿದರು. ವಿಜ್ಞಾನ ಗೋಷ್ಠಿ, ಮಕ್ಕಳ ಕೂಟ ಅಂಗವಾಗಿ ನಡೆದುದು ಹೊಸ ಉಪಕ್ರಮ. ನಾಡಿನ ಪ್ರಗತಿಗೆ ವಿಜ್ಞಾನ ಪ್ರಗತಿ ಅವಶ್ಯವೆಂದು ಬೇರೆ ಹೇಳಬೇಕಿಲ್ಲ. ಮಾನವನ ಉಪಯೋಗಕ್ಕೆ ಆವಶ್ಯವಾದ ವೈಜ್ಞಾನಿಕ ಪ್ರಗತಿಯತ್ತ ದೇಶದ ಮುಖಂಡರು ಗಮನಿಸುವದು ಅವಶ್ಯ. ಸಮ್ಮೇಲನದಲ್ಲಿ ಒಟ್ಟಾರೆ ೧೬ ಗೊತ್ತುವಳಿ ಪಾಸಾಗಿದ್ದು ಅವೆಲ್ಲ ಕರ್ನಾಟಕದ ಪ್ರಗತಿಯನ್ನನುಲಕ್ಷಿಸಿವೆ. ಬರಿ ಗೊತ್ತುವಳಿ ಪಾಸುಮಾಡುವದರಿಂದ ಉದ್ದಿಷ್ಟ ಸಾಧಿಸಲಾರದು. ಅದನ್ನು ಕಾರ್ಯರೂಪದಲ್ಲಿ ತರುವದು ಅವಶ್ಯ. ಈ ಸಮ್ಮೇಲನದವರು ಇದನ್ನು ತಿಳಿದುಕೊಂಡೆ ಗೊತ್ತುವಳಿಗಳನ್ನು ಕಾರ್ಯರೂಪದಲ್ಲಿ ತರುವದಕ್ಕಾಗಿ ಪ್ರತ್ಯೇಕ ಗೊತ್ತುವಳಿ ಮಾಡಿದ್ದಾರೆ. ಅಶ್ಲೀಲ ಸಾಹಿತ್ಯವನ್ನು ನಿಷೇಧಿಸುವ ಗೊತ್ತುವಳಿಯೊಂದು ಸ್ವೀಕೃತವಾಗಿದೆ. ಅಶ್ಲೀಲ ಸಾಹಿತ್ಯವಾವುದೆಂಬ ಬಗ್ಗೆ ಕೆಲವರು ವಾದಿಸುವುದುಂಟು. ಸದ್ಯದ ಸಮಾಜದ ಆಚಾರವಿಚಾರ ರೂಢಿ ಸಂಪ್ರದಾಯಗಳಿಗೆ ವಿರುದ್ಧವಾದುದು. ಹೆಣ್ಣುಮಕ್ಕಳ ಭಾವನೆಗಳಿಗೆ ನೋವನ್ನುಂಟು ಮಾಡುವಂತಹದು ಸಾಮಾನ್ಯವಾಗಿ ಅಶ್ಲೀಲ ಸಾಹಿತ್ಯವೆಂದು ಹೇಳಬಹುದು. ಇದರಲ್ಲಿ ಹಿಂದಿನ ಸಂಪ್ರದಾಯವನ್ನು ನೋಡುವ ಆವಶ್ಯಕತೆಯಿಲ್ಲ. ಕರ್ನಾಟಕಕ್ಕೆ ಪ್ರತ್ಯೇಕ ಆಕಾಶವಾಣಿ ಕೇಂದ್ರ, ಹುಬ್ಬಳ್ಳಿ ಕಾರವಾರ ಹುಬ್ಬಳ್ಳಿ-ಮಂಗಳೂರ ರೇಲ್ವೆ ಹಾಕಿ ಕರ್ನಾಟಕದ ಉದ್ಯೋಗಾಭಿವೃದ್ಧಿಗೆ ಸಹಾಯ ಮಾಡಬೇಕೆಂದು ಕೇಳಿಕೊಂಡಿದ್ದು ಉಚಿತವಾಗಿದೆ. ಕರ್ನಾಟಕದ ಜೀವಾಳದ ಪ್ರಶ್ನೆಯಾದ ಸ್ವತಂತ್ರ ಪ್ರಾಂತದ ಪ್ರಶ್ನೆಯನ್ನು ಘಟನಾ ಸಮಿತಿಯವರು ಇತ್ಯರ್ಥ ಮಾಡಬೇಕೆಂಬ ಮುಖ್ಯ ಗೊತ್ತುವಳಿ ಅತ್ಯಂತ ಮಹತ್ವದ್ದು. ಅದೇ ರೀತಿಯಾಗಿ ಬೆಳಗಾವಿಯಲ್ಲಿ ಮರಾಠಿಗರು ಕನ್ನಡ ಕಾರ್ಯಕರ್ತರ ಮೇಲೆ ಮಾಡಿದ ಅತ್ಯಾಚಾರವನ್ನು ನಿಷೇಧಿಸುವ ಗೊತ್ತುವಳಿಯೂ ಅವಶ್ಯವಾಗಿದೆ. ನಾವು ಈ ಮೊದಲು ಬರೆದಂತೆ ಇಂಥ ದುರ್ವರ್ತನಗಳಿಂದ ಯಾವ ಉದ್ದೇಶವೂ ಸಾಧಿಸಲಾರದು. [illegible]ಗಳನ್ನು ನಿರ್ಣಯಿಸುವದು ಗಡಿ ಸಮಿತಿಯ [illegible]ಕರ್ತವ್ಯ ಆಗಿದ್ದರಿಂದ ಈ ಬಗ್ಗೆ ಈಗಲೆ ಯಾರೂ ತಲೆ ಒಡೆಯತಕ್ಕದ್ದಲ್ಲ. ಇಂಥದೊಂದು ಭಾಗ ತಮ್ಮದೆಂದು ಸಿದ್ಧಪಡಿಸುವ ಪುರಾವೆಗಳನ್ನು ಮಾತ್ರ ಸಂಗ್ರಹಿಸಬಹುದು. ಇರಲಿ. ಒಟ್ಟಾರೆ ಈ ಸಮ್ಮೇಲನ ಮತ್ತು ವಿವಿಧ ಗೋಷ್ಠಿಗಳು ಜನತೆಯಲ್ಲಿ ಜಾಗ್ರತೆಯನ್ನುಂಟು ಮಾಡಿದ್ದು ಕಾರ್ಯ ತತ್ಪರರಾಗುವಂತೆ ಮಾಡಲೆಂದು ಹಾರೈಸುತ್ತೇವೆ.

## ಗ್ರಾಮೋದ್ಯೋಗ ಪ್ರದರ್ಶನ

ಧಾರವಾಡ ಜಿಲ್ಹಾ ಲೋಕಲ್ ಬೋರ್ಡಿನವರು ಕಳೆದ ವರ್ಷದಿಂದ ಪ್ರಾರಂಭಿಸಿದ ಗ್ರಾಮೋದ್ಯೋಗ ಪ್ರದರ್ಶನ ೩೦ ನೇ ತಾರೀಕು ಸಾಯಂಕಾಲ ಹುಬ್ಬಳ್ಳಿಯಲ್ಲಿ ಅರ್ಥಸಚಿವರಾದ ಮಾನ್ಯ ವೈಕುಂಠಲಾಲ ಮೆಹತಾ ಇವರ ಹಸ್ತದಿಂದ ಪ್ರಾರಂಭವಾಯಿತು. ಲ್ಯಾಮಿಂಗ್ಟನ ಹಾಯಸ್ಕೂಲಿನ ಹಿಂದಿನ ಭವ್ಯ ಬಯಲಿನಲ್ಲಿ ಈ ಪ್ರದರ್ಶನವನ್ನೇರ್ಪಡಿಸಲಾಗಿದ್ದು ಸುಮಾರು ೬೦ ಅಂಗಡಿಗಳು ಇದರಲ್ಲಿ ಮಂಡಿತವಾಗಿವೆ. ಕರ್ನಾಟಕದಲ್ಲಿ ಸಿದ್ಧವಾಗುತಿರುವ ತರತರದ ಸಾಮಾನಗಳು ಇದರಲ್ಲಿ ಪ್ರದರ್ಶಿತವಾಗಿದೆ. ಇವಲ್ಲದೆ ಪ್ರಾತ್ಯಕ್ಷಿಕೆಗಳನ್ನೂ ಮಾಡಿತೋರಿಸುತಿರುವರು. ಪರಕೀಯರ ವ್ಯಾಪಾರ ಪ್ರಭುತ್ವ ಪ್ರಾರಂಭವಾದಂದಿನಿಂದ ಹಿಂದುಸ್ತಾನದ ಕಲಾಕೈಗಾರಿಕೆಗಳು ಒಂದೊಂದಾಗಿ ಹಾಳಾಗುತ್ತ ನಡೆದುದು ಸರ್ವಶ್ರುತ. ಈ ದುಃಸ್ಥಿತಿ ದೂರಾಗಿ ಕರ್ನಾಟಕದ ಉದ್ಯೋಗಾಭಿವೃದ್ಧಿಯಾಗಬೇಕಾದರೆ ಇಂಥ ಪ್ರದರ್ಶನಗಳನ್ನೇರ್ಪಡಿಸಿ ಜನತೆಯಲ್ಲಿ ಗ್ರಾಮೋದ್ಯೋಗಗಳ ಪ್ರಚಾರ ಮಾಡುವದಲ್ಲದೆ ಪ್ರಾತ್ಯಕ್ಷಿಕೆಗಳನ್ನೇರ್ಪಡಿಸಿ ಆಯಾ ಉದ್ಯೋಗಸ್ಥರಿಗೆ ಅವರವರ ಉದ್ಯೋಗಗಳನ್ನು ಸುಧಾರಿಸಿಕೊಳ್ಳುವ ಸಾಧನವನ್ನೊದಗಿಸಿ ಕೊಡಬೇಕು. ಈ ದೃಷ್ಟಿಯಿಂದ ಲೋಕಲ್ ಬೋರ್ಡಿನವರ ಉಪಕ್ರಮ ಸ್ತುತ್ಯವಾಗಿದೆಂದು ನಾವು ಹೇಳಬಹುದು. ಇಂಥ ಪ್ರದರ್ಶನಕ್ಕೆ ಔದ್ಯೋಗಿಕ ಮಂತ್ರಿಗಳು ಗ್ರಾಮೋದ್ಯೋಗಗಳ ಅಭಿವೃದ್ಧಿಗಾಗಿ ಎಂದಿನಿಂದಲೂ ದುಡಿಯುತ್ತ ಬಂದಿರುವವರೂ ಆಗಿರುವ ಮಾನ್ಯ ವೈಕುಂಠಲಾಲರನ್ನು ಕರೆದಿದ್ದೂ ಅತ್ಯಂತ ಉಚಿತವಾಗಿದೆ. ಮಾನ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ಗ್ರಾಮೋದ್ಯೋಗಗಳ ಮಹತ್ವವನ್ನರುಹಿ ಅವುಗಳನ್ನು ಪ್ರೋತ್ಸಾಹಿಸುವ ಅವಶ್ಯಕತೆಯನ್ನು ಸ್ಪಷ್ಟ ಶಬ್ದಗಳಲ್ಲಿ ಪ್ರತಿಪಾದಿಸಿದರು. ಅಲ್ಲದೆ ಸರಕಾರದವರು ಈ ದಿಸೆಯಲ್ಲಿ ನಡೆಸಿರುವ ಕಾರ್ಯದ ರೂಪರೇಷೆಗಳನ್ನು ವಿವರಿಸಿದರು. ಜನತಾ ಸರಕಾರದಿಂದ ಜನರು ಬಹಳ ಅಪೇಕ್ಷಿಸುತಿದ್ದರೂ ಅವರ ಸಹಾಯ ಸಹಕಾರಗಳ ಸಂಪೂರ್ಣ ಸಿಕ್ಕರೆ ಕೆಲ ಮಟ್ಟಿಗಾದರೂ ಅವರ ಅಪೇಕ್ಷೆಗಳನ್ನು ಸರಕಾರ ಪೂರೈಸಬಲ್ಲದೆಂದು ಮಾನ್ಯ ಮಂತ್ರಿಗಳು ಹೇಳಿದರು. ಬರಿ ಸರಕಾರವನ್ನೇ ಟೀಕಿಸುತ್ತ ಕೂಡ್ರುವದರಿಂದ ಇಲ್ಲವೆ ಒಮ್ಮೆಲೆ ಹಿಂದುಸ್ತಾನವನ್ನು ನಂದನವನ ಮಾಡಬೇಕೆಂದು ಅಪೇಕ್ಷಿಸುವದರಿಂದ ಉದ್ದಿಷ್ಟ ಸಾಧಿಸಲಾರದು. ಬಹಳ ದಿನಗಳಿಂದ ಪರಕೀಯರ ಆಕ್ರಮಣಕ್ಕೊಳಗಾದ ಹಿಂದುಸ್ತಾನವು ತನ್ನದನ್ನು ಮರಳಿ ಪಡೆಯಬೇಕಾದರೆ ಸ್ವಲ್ಪ ಕಾಲ ಬೇಕೆಂಬುದನ್ನು ಯಾರೂ ಅಲ್ಲಗಳೆಯರು. ಮಂತ್ರಿಮಂಡಳ ಆ ದಿಸೆಯಲ್ಲಿ ಕೆಲಸ ಪ್ರಾರಂಭಿಸಿದೆಯೊ ಇಲ್ಲವೊ ಎಂಬದನ್ನು ಸಾರ್ವಜನಿಕರು ತಿಳಿದುಕೊಳ್ಳತಕ್ಕದ್ದು. ಹಿಂದುಸ್ತಾನದ ಬಡತನಕ್ಕೆ ಕಾರಣವಾದ ಗ್ರಾಮೋದ್ಯೋಗಗಳ ನಾಶವನ್ನು ತಡೆದು ಅವುಗಳ ಪುನರುಜ್ಜೀವನ ಮಾಡುವುದರಿಂದ ಆ ಬಡತನ ಹಿಂಗಬಲ್ಲದೆಂದು ಮಾನ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದ್ದು ಉಚಿತವಾಗಿದೆ. ರಾಟಿಯ ಸಂದೇಶವನ್ನು ತಿಳಿಸುತ್ತ ಮಂತ್ರಿಗಳು ಮದ್ರಾಸ ಸರಕಾರದ ಜವಳಿ ಧೋರಣದ ಸಂಬಂಧದಲ್ಲಿ ಮುಂಬಯಿ ಸರಕಾರದವರು ಕಳೆದ ಆರು ತಿಂಗಳಿಂದ ವಿಚಾರ ನಡೆಸಿರುವರು, ಅರ್ಥಶಾಸ್ತ್ರ ವಿಶಾರದರಿಂದ ಸಲಹೆ ಪಡೆಯುತಿರುವರೆಂದು ಸಾರಿದರು. ಖಾದಿಯ ಸಂದೇಶ ಎಲ್ಲರಿಗೂ ಮುಟ್ಟಬೇಕಾದರೆ ಜವಳಿ ಗಿರಣಿಗಳ ಸಂಬಂಧದಲ್ಲಿ ಸರಕಾರದವರು ನಿಶ್ಚಿತ ಧೋರಣ ಸ್ವೀಕರಿಸಬೇಕಾದುದು ಅವಶ್ಯವಾಗಿದೆ. ಮಾನ್ಯ ಮಂತ್ರಿಗಳು ಕೇಳಿಕೊಂಡಂತೆ ಸಾರ್ವಜನಿಕರು ತಮ್ಮ ತಮ್ಮ ಅಭಿಪ್ರಾಯಗಳನ್ನು ಮೊದಲೆ ತಿಳಿಸಬೇಕು. ಅಂದರೆ ಸರಕಾರದವರಿಗೆ ಆ ಬಗ್ಗೆ ವಿಚಾರ ಮಾಡಲು ಅವಕಾಶ ಸಿಕ್ಕುವುದು. ಸರಕಾರದವರು ಮೊದಲೆ ಕೇಳಿಕೊಂಡರೂ ತಮ್ಮ ಅಭಿಪ್ರಾಯವನ್ನು ತಿಳಿಸದೆ ಹಿಂದುಗಡೆ ಟೀಕಿಸುತ್ತ ಕೂಡ್ರುವದೊಂದು ಜನರಲ್ಲಿ ರೂಢವಾಗಿಬಿಟ್ಟಿದೆ. ಇದು ಹೋಗಬೇಕು. ಮೊದಲೆ ಸರಕಾರದವರಿಗೆ ಎಲ್ಲವನ್ನು ತಿಳಿಸಬೇಕು. ಧಾರವಾಡ ಜಿಲ್ಹೆ ಮತ್ತು ಇತರ ಕಡೆಗಳಲ್ಲಿನ ಜನರು ಈ ಪ್ರದರ್ಶನದ ಪೂರ್ಣ ಲಾಭ ಪಡೆಯಬೇಕೆಂದು ಬಿನ್ನವಿಸುತ್ತೇವೆ.

# ಸಂಪಾದಕೀಯ * * * * ಟೀಕೆ-ಟಿಪ್ಪಣಿಗಳು

## ಪುನರ್ಘಟಿತ ನಡುಗಾಲ ಸರಕಾರ

ನಡುಗಾಲ ಸರಕಾರ ಪುನರ್ಘಟಿತವಾಗಿ ಬೇರೆ ಬೇರೆ ಪಕ್ಷ ಪ್ರತಿನಿಧಿಗಳು ಆಡಳಿತವನ್ನು ಸಾಗಿಸುತಿರುವರು. ಈ ಸಂಬಂಧದ ವಿವರಗಳನು ಬೇರೆ ಕಡೆ ಪ್ರಸಿದ್ಧಿಸಿದ್ದೇವೆ. ಸಿಮಲಾ ಪರಿಷತ್ತಿನ ಕಾಲಕ್ಕೆ ಸ್ಥಾಪಿತವಾಗಬೇಕಾಗಿದ್ದ ನಡುಗಾಲ ಸರಕಾರ ಇಷ್ಟು ತಡಮಾಡಿ ಸ್ಥಾಪಿತವಾದರೂ ಹಿಂದುಸ್ತಾನದ ಸ್ವಾತಂತ್ರ್ಯ ಸಂಪಾದನೆಯ ಕಾರ್ಯದಲ್ಲಿ ಅದು ಯಶಸ್ವಿಯಾದರೆ ವಿಲಂಬವು ಕ್ಷಮ್ಯವೆಂದೇ ಹೇಳಬೇಕಾಗುವದು. ಕಾಂಗ್ರೆಸ ಲೀಗಗಳಲ್ಲಿ ಒಡಂಬಡಿಕೆಯಾಗಿ ಈ ನಡುಗಾಲ ಸರಕಾರ ಸ್ಥಾಪಿತವಾಗಿದ್ದರೆ ಭಾರತೀಯರ ಧ್ಯೇಯ ಬೇಗ ಕೈಗೂಡುತಿತ್ತು. ಆದರೆ ದೇಶದ ದುರ್ದೈವವಿನ್ನೂ ತೀರಿಲ್ಲ. ಎರಡು ಪ್ರಮುಖ ಪಕ್ಷಗಳಲ್ಲಿ ಒಡಂಬಡಿಕೆ ಸಾಧ್ಯವಾಗಲಿಲ್ಲ. ಆದರೂ ಸಹಕಾರ ಭಾವನೆಯಿಂದ ಮುಸಲ್ಮಾನರ ಹಿತದ ದೃಷ್ಟಿಯಿಂದ ಮತ್ತು ಹಿಂದುಸ್ತಾನದ ಹಿತದ ದೃಷ್ಟಿಯಿಂದ ನಡುಗಾಲ ಸರಕಾರದಲ್ಲಿ ಸೇರುವುದಾಗಿ ಮುಸ್ಲಿಂ ಲೀಗಿನವರು ಇದರಲ್ಲಿ ಸೇರಿರುವರು. ಆದುದರಿಂದ ಈ ನಡುಗಾಲ ಸರಕಾರದ ಭವಿತವ್ಯವು ಉಜ್ವಲವಾಗಿದೆಂದು ಹೇಳಲಡ್ಡಿಯಿಲ್ಲ. ಸಂಯುಕ್ತ ಜವಾಬ್ದಾರಿಯನ್ನು ಪೂರ್ಣ ಒಪ್ಪಿಕೊಂಡು ಮುಸ್ಲಿಂ ಲೀಗಿನವರು ಆಡಳಿತದಲ್ಲಿ ಭಾಗವಹಿಸಿದ್ದರೆ ಇನ್ನಷ್ಟು ಚೆನ್ನಾಗುತಿತ್ತು. ಮುಸ್ಲಿಂ ಲೀಗಿನ ಧುರೀಣರಾದ ಲಿಯಾಕತ ಅಲ್ಲೀಖಾನರು ಮಂತ್ರಿತ್ವವನ್ನು ವಹಿಸಿದ ನಂತರ ಪತ್ರಿಕಾ ಪರಿಷತ್ತಿನಲ್ಲಿ ಮುಸ್ಲಿಂ ಲೀಗಿಗೂ ಸ್ವಾತಂತ್ರ್ಯ ಬೇಕಾಗಿದೆ. ಪರಕೀಯ ಪ್ರಭುತ್ವವನ್ನು ಹೊಡೆದು ಹಾಕುವದು ಅದರ ಧ್ಯೇಯವಾಗಿದೆ ಎಂದು ಹೇಳಿರುವರು. ಆದರೆ ಅದೇ ಕಾಲಕ್ಕೆ ಪಾಕಿಸ್ತಾನದ ಬಗ್ಗೆಯೂ ಅವರು ಹೇಳದೆ ಬಿಡಲಿಲ್ಲ. ಇವೆರಡೂ ಧ್ಯೇಯವನ್ನು ಅವರೆಂತು ಸಾಧಿಸುವರೊ ತಿಳಿಯದು. ಏನೇ ಇದ್ದರೂ ಮೊದಲು ಹಿಂದುಸ್ತಾನವನ್ನು ಸ್ವತಂತ್ರ ಮಾಡಿ ನಂತರ ಪಾಕಿಸ್ತಾನದ ಬಗ್ಗೆ ಮುಸ್ಲಿಂ ಲೀಗಿನವರು ವಿಚಾರ ಮಾಡಬಹುದು. ಈ ಭಾವನೆಯಿಂದ ಮುಸ್ಲಿಂ ಲೀಗಿನವರು ಕಾರ್ಯ ಮಾಡಿದರೆ ನಡುಗಾಲ ಸರಕಾರ ಯಶಸ್ವಿಯಾಗುವದು. ಬೇರೆ ಬೇರೆ ಪಕ್ಷ ಪ್ರಮುಖರು ಮತ್ತು ವೈಸರಾಯರು ಕೇಳಿಕೊಂಡಂತೆ ದೇಶದಲ್ಲಿ ನಡೆದ ಜಾತೀಯ ಗಲಭೆಗಳು ಪೂರ್ಣವಾಗಿ ನಿಲ್ಲುವಂತೆ ಅಲ್ಲಲ್ಲಿನ ಜನರು ತಮ್ಮ ವರ್ಚಸ್ಸನ್ನು ಪಯೋಗಿಸಬೇಕು. ನಡುಗಾಲ ಸರಕಾರದ ಮಂತ್ರಿಗಳೂ ತಮ್ಮ ವರ್ಚಸ್ಸನ್ನುಪಯೋಗಿಸಿ ಜಾತೀಯ ಗಲಭೆಗಳನ್ನು ನಿಲ್ಲಿಸಬೇಕು ಅಂದರೇನೇ ದೇಶವು ಶಾಂತಿ ಸಮೃದ್ಧಿಯಲ್ಲಿ ನಲಿದಾಡಬಹುದು.

## ನೌಖಾಲಿ ದುರಂತ

ಪೂರ್ವಬಂಗಾಲದಲ್ಲಿ ನಡೆದ ದುರಂತದ ವಿವರಗಳನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆ ಕೊಟ್ಟಿದ್ದೇವೆ. ಮುಸ್ಲಿಂಲೀಗ ಮುಖಂಡರು ಮತ್ತು ಪತ್ರಿಕೆಗಳು ಇದರ ತೀವ್ರತೆಯನ್ನು ಕಡಿಮೆ ಮಾಡಲು ಪ್ರಯತ್ನಿಸುತಿರುವದು ನಿಜವಾಗಿಯೂ ಆ ಸಮಾಜಕ್ಕೇ ಘಾತಕವಾಗಿದೆ. ಈ ಸಂಬಂಧದಲ್ಲಿ ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷರು ಪೀಡಿತ ಭಾಗಗಳಲ್ಲಿ ಸಂಚಾರಮಾಡಿ ಬಂದ ನಂತರ ಹೊಸದಿಲ್ಲಿಯಲ್ಲಿ ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಈದುರಂತದ ತೀವ್ರತೆಯನ್ನು ಕಡಿಮೆ ಮಾಡುವದನ್ನು ಘಾತಕವೆಂದು ಸ್ಪಷ್ಟವಾಗಿ ಹೇಳಿದರು. ವೃತ್ತಪತ್ರಿಕೆಗಳಲ್ಲಿ ಬಂದ ಮರಣ ಸಂಖ್ಯೆ ಅತಿರಂಜಿತವಾಗಿದ್ದರೆ ಸರಕಾರದವರು ತಮ್ಮ ನಿಶ್ಚಿತ ಅಂಕಿಸಂಖ್ಯೆಗಳನ್ನು ಪ್ರಸಿದ್ಧಿಸಬೇಕು. ಎಷ್ಟೇ ಜನರು ಸತ್ತಿರಲಿ ಅವರು ಪುಂಡರದೊಂಬಿಗೇಕೆ ಆಹುತಿಯಾದರೆಂಬುದು ಮಹತ್ವದ ಪ್ರಶ್ನೆಯಾಗಿದೆಂದು ಅವರು ಹೇಳಿದರು. ಪುಂಡಾಟಿಕೆ ನಡಿಸಿದವರೆಲ್ಲ ಮುಸಲ್ಮಾನರೆ ಇದ್ದರೆಂದು ಆಚಾರ್ಯರು ಸ್ಪಷ್ಟವಾಗಿ ಸಾರಿದ್ದಾರೆ. ಒತ್ತಾಯದಿಂದ ಮತಾಂತರಿಸಿದವರನ್ನೂ ಕೆಡಿಸಿದವರನ್ನೂ ಕೊಂದು ಬಿಟ್ಟಿದ್ದರೆ ದುರಂತದ ಸ್ವರೂಪವಷ್ಟು ಭಯಂಕರವಾಗುತ್ತಿರಲಿಲ್ಲ. ಪುಂಡರು ಅವ್ಯಾಹತವಾಗಿ ೧೫ ದಿನ ತಮ್ಮ ಪುಂಡಾಟಿಕೆ ನಡಿಸಿದರು. ಯಾವ ಉಪಾಯಗಳನ್ನೂ ಕೈಕೊಳ್ಳುವ ಸಾಮರ್ಥ್ಯ ಸರಕಾರದಲ್ಲಿರಲಿಲ್ಲ. ಪುಂಡರಿಗೆ ಸ್ಥಳಿಕ ಮುಸ್ಲಿಂಲೀಗಿನ ಬೆಂಬಲವಿತ್ತೆಂದೂ ಸಿದ್ಧಪಡಿಸಬಲ್ಲೆನೆಂದೂ ಅವರು ಹೇಳಿರುವರು. ಇದೊಂದು ಸುಸಂಘಟಿತ ಹಿಂಸಾಚಾರವೆಂದೂ ಪೂರ್ವಾಲೋಚನೆಯಿಂದ ನಡೆಸಲ್ಪಟ್ಟದ್ದೆಂದೂ ಲೆ. ಜ, ಬುಚರರ ಅಭಿಪ್ರಾಯವಾಗಿದೆ. ದೊಡ್ಡ ನಗರಗಳಲ್ಲಿ ತಮ್ಮ ಕಾಯಕ ನಡೆಯುವದಿಲ್ಲ. ಅಲ್ಲಿ ತಮ್ಮನ್ನು ಹಿಂದೂಗಳು ಹಣ್ಣುಗಾಯಿ ನೀರಗಾಯಿ ಮಾಡಬಹುದೆಂದು ತಿಳಿದು ಹಳ್ಳಿಗಳಲ್ಲಿ ಅತ್ಯಾಚಾರ ನಡೆಸಿದರೆಂದು ಮುಂತಾಗಿ ಕೃಪಲಾನಿಯವರು ಹೇಳಿದರು. ಆಚಾರ್ಯ ಕೃಪಲಾನಿಯವರು ಅತ್ಯಂತ ನಿಷ್ಠುರ ಅಹಿಂಸಾವಾದಿಗಳು. ಮಹಾತ್ಮರ ಪ್ರಮುಖ ಅನುಯಾಯಿಗಳು. ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷರು. ಅವರಲ್ಲಿ ಯಾವದೇ ಬಗೆಯ ಆರೋಪ ಹೊರಿಸುವಂತಿಲ್ಲ. ಪರಿಸ್ಥಿತಿಯನ್ನು ಇದ್ದಂತೆ ಸ್ಪಷ್ಟವಾಗಿ ಹೇಳುವವರವರು. ಆದುದರಿಂದ ಅವರ ಅಭಿಪ್ರಾಯದತ್ತ ಮುಸ್ಲಿಂ ಲೀಗ ಪ್ರಮುಖರು ನಿರ್ವಿಕಾರ ಮನಸಿನಿಂದ ಗಮನಿಸುವದು ಅತ್ಯವಶ್ಯವಾಗಿದೆ. ನೌಖಾಲಿಯ ದುರಂತದ ಬಗ್ಗೆ ಯಾರಾದರೂ ಹೇಳಹತ್ತಿದರೆ ಕಾಂಗ್ರೆಸ ಪ್ರಾಂತಗಳಲ್ಲಿಯ ಗಲಭೆಗಳನ್ನು ಬೊಟ್ಟು ಮಾಡಿ ತೋರಿಸುವದು ಸಮಂಜಸವಲ್ಲ. ಗಲಭೆಗಳು ಎಲ್ಲಿಯೇ ನಡೆದಿರಲಿ ಅವನ್ನು ತೀವ್ರವಾಗಿ ಖಂಡಿಸುವದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಹೇಗಾದರೂ ನಡುಗಾಲ ಸರಕಾರದಲ್ಲಿ ಕಾಂಗ್ರೆಸ್-ಲೀಗ ಮತ್ತು ಉಳಿದ ಅಲ್ಪಸಂಖ್ಯಾಕರ ಪ್ರತಿನಿಧಿಗಳು, ಸೇರಿರುವರು. ಅವರು ದೇಶದಲ್ಲಿಯ ಈ ಗಂಭೀರ ಪರಿಸ್ಥಿತಿಯ ಬಗ್ಗೆ ವಿಚಾರ ಮಾಡಿ ಶಾಂತಿಸ್ಥಾಪನೆಗಾಗಿ ಏನು ಮಾಡಬೇಕೆಂಬದನ್ನು ಗೊತ್ತುಪಡಿಸಬೇಕು ಪ್ರಾಂತಗಳಲ್ಲಿ ಶಾಂತಿ ಸುವ್ಯವಸ್ಥೆ ಇಡುವದು ಆಯಾ ಪ್ರಾಂತಿಕ ಸರಕಾರಗಳಿಗೆ ಸಂಬಂಧಿಸಿದ್ದರೂ ಆಯಾ ಪ್ರಾಂತಗಳಲ್ಲಿಯ ಕಾಂಗ್ರೆಸ್ ಮತ್ತು ಲೀಗ ಸರಕಾರಗಳು ನಡುಗಾಲ ಸರಕಾರದಲ್ಲಿಯ ತಮ್ಮ ಮುಖಂಡರು ವಿಚಾರಾಂತ್ಯದಲ್ಲಿ ಮಾಡಿದ ನಿರ್ಣಯಗಳನ್ನು ಕಾರ್ಯರೂಪದಲ್ಲಿ ತರಲು ಹಿಂಜರಿಯರೆಂಬುದು ಸುಸ್ಪಷ್ಟವಾಗಿದೆ.

## ಜಾಗತಿಕ ಶಾಂತಿ

ಯುದ್ಧ ಸಮಯದಲ್ಲಿ ಜಾಗತಿಕ ಸ್ವಾತಂತ್ರ್ಯ ಶಾಂತಿಯ ಮಾತುಗಳನ್ನು ಮಿತ್ರ ಸರಕಾರದವರು ಆಡುತಿದ್ದರು. ಯುದ್ಧಾನಂತರ ಜಾಗತಿಕ ಸ್ವಾತಂತ್ರ್ಯದ ಪ್ರಶ್ನೆ ಕೆಲಮಟ್ಟಿಗೆ ಹಿಂದೆ ಬಿದ್ದಂತಾಗಿದೆ. ಸಾಮ್ರಾಜ್ಯತ್ವದ ರಾಷ್ಟ್ರಗಳು ತಮ್ಮ ಸ್ವಾರ್ಥಸಾಧನೆಗಾಗಿ ತಮ್ಮ ವಶದಲ್ಲಿದ್ದ ರಾಷ್ಟ್ರಗಳನ್ನು ಸ್ವತಂತ್ರ ಮಾಡಲು ಇನ್ನೂ ಸಿದ್ಧವಾಗಲೊಲ್ಲವು. ಅಲ್ಲಲ್ಲಿನ ಪಕ್ಷ ಪಂಗಡಗಳಲ್ಲಿನ ಮತಭೇದದ ನೆವ ಮುಂದೆ ಮಾಡಿ ಸ್ವಾತಂತ್ರ್ಯ ಕೊಡುವುದನ್ನು ಮುಂದಕ್ಕೆ ಹಾಕುತಿರುವರು. ಏಶಿಯ ರಾಷ್ಟ್ರಗಳಲ್ಲಿ ಯುರೋಪ ರಾಷ್ಟ್ರಗಳು ಕಳೆದ ಧೋರಣೆಯಿಂದ ಇದು ಸ್ಪಷ್ಟವಾಗುವದು. ಜಾಗತಿಕ ಸ್ವಾತಂತ್ರ್ಯದ ಪ್ರಶ್ನೆ ಈ ರೀತಿ ಹಿಂದೂಡಲ್ಪಟ್ಟಿದೆಂದು ಹೇಳಬಹುದು. ಈಗ ಯುಕ್ತ ರಾಷ್ಟ್ರಗಳ ಸಭೆ ನ್ಯೂಯಾರ್ಕದಲ್ಲಿ ನಡೆದಿದ್ದು ಜಾಗತಿಕ

—೧೪ನೇ ಪುಟಕ್ಕೆ

# ನಡುಗಾಲ ಸರಕಾರದ ಪುನರ್ಘಟನೆ

## ಮುಸ್ಲಿಂ ಲೀಗು ಸರಕಾರದಲ್ಲಿ ಸೇರಿತು

### ಸೌಹಾರ್ದದಿಂದ ಸಹಕರಿಸಲು ಲೀಗ ಪ್ರತಿನಿಧಿಗಳಿಗೆ ವೈಸರಾಯರ ಮನವಿ

### ಬ್ರಿಟಿಶ್‌ರ ಭೇದನೀತಿಯ ಬಗ್ಗೆ ಖಾನ ಅಬ್ದುಲ್‌ಗಫರಖಾನರ ಎಚ್ಚರಿಕೆ

ಭಾರತೀಯರು ಬಹುದಿನಗಳಿಂದ ಬಯಸುತ್ತಿದ್ದ ನಡುಗಾಲ ಸರಕಾರದ ರಚನೆ ಪರಿಪೂರ್ಣವಾಗಿ ಇಂದು ಕಾಂಗ್ರೆಸ್ ಲೀಗ ಈ ಎರಡು ಪಕ್ಷಗಳ ಪ್ರತಿನಿಧಿಗಳು ಮತ್ತು ಪ್ರಮುಖ ಅಲ್ಪಸಂಖ್ಯಾಕ ಪಕ್ಷಗಳ ಪ್ರತಿನಿಧಿಗಳು ಅದರಲ್ಲಿ ಸೇರ್ಪಡೆಯಾಗಿದ್ದಾರೆ. ಕಾಂಗ್ರೆಸ-ಲೀಗಗಳಲ್ಲಿ ಒಡಂಬಡಿಕೆಯಾಗಿ ನಡುಗಾಲ ಸರಕಾರದ ಪುನರ್ಘಟನೆಯಾಗಿದ್ದರೆ ಹೆಚ್ಚು ಒಳಿತಾಗುತಿತ್ತು. ಆದರೂ ಸಹಕಾರ ಮನೋವೃತ್ತಿಯಿಂದ ಲೀಗ ಪ್ರತಿನಿಧಿಗಳು ಸರಕಾರದಲ್ಲಿ ಸೇರಿರುವರೆಂದ ಬಳಿಕ ವಿಶೇಷ ತಿಕ್ಕಾಟವೇಳದೆ ಆಡಳಿತೆ ಸಾಗಬಹುದೆಂದು ಅನೇಕರು ಆಶಿಸಿದ್ದಾರೆ. ಲೀಗಿನವರು ನಡುಗಾಲ ಸರಕಾರದಲ್ಲಿ ಸೇರಲು ನಿರ್ಧರಿಸಿದ ಬಳಿಕವೂ ಖಾತೆಗಳ ಹಂಚುವಿಕೆಯ ಸಂಬಂಧದಲ್ಲಿ ತಿಕ್ಕಾಟವಾಯಿತೆಂದು ಮುಂದೆ ಕೊಟ್ಟಿರುವ ಪತ್ರವ್ಯವಹಾರದಿಂದ ಗೊತ್ತಾಗುವದು. ಆದರೂ ಲೀಗಿನವರು ಒಳಗೆ ಸೇರಿಕೊಂಡೇ ಪಾಕಿಸ್ತಾನ ಸಂಪಾದಿಸುವ ಧ್ಯೇಯ ವಿಟ್ಟುಕೊಂಡು ನಡುಗಾಲ ಸರಕಾರ ಸೇರಿರುವರೆಂದು ಅವರ ಪ್ರತಿನಿಧಿಗಳ ಮಾತುಗಳಿಂದಲೆ ಗೊತ್ತಾಗುವದು.

### ಹೊಸ ಮಂತ್ರಿಗಳ ಖಾತೆಗಳು

೧. ಪಂಡಿತ ಜವಾಹರಲಾಲ ನೆಹರು
ವಿದೇಶ ಮತ್ತು ವಸಾಹತು.

೨. ಸರದಾರ ವಲ್ಲಭಭಾಯಿ ಪಟೇಲ —
ಗೃಹ ಸುದ್ದಿ ಮತ್ತು ಆಕಾಶವಾಣಿ

೩. ಡಾ. ರ್‍ಯಾಜೇಂದ್ರಪ್ರಸಾದ
ಆಹಾರ ಮತ್ತು ಒಕ್ಕಲತನ

೪. ಸಿ. ರಾಜಗೋಪಾಲಾಚಾರ
ಶಿಕ್ಷಣ ಮತ್ತು ಕಲೆ.

೫. ಅಸಫಅಲ್ಲಿ- ರೇಲ್ವೆ.

೬. ಜಗಜೀವನರಾಮ- ಕೂಲಿಕಾರ.

೭. ಸರದಾರ ಬಲದೇವಸಿಂಗ- ಸಂರಕ್ಷಣ.

೮. ಡಾ. ಜಾನಮಥಾಯಿ
ಉದ್ಯೋಗ ಮತ್ತು ಪೂರೈಕೆ.

೯. ಸಿ. ಎಚ್. ಭಾಭಾ
ವರ್ಕ್ಸ,ಮಾಯಿನ್ಸ ಮತ್ತು ಪಾವರ.

೧೦. ಲಿಯಾಕತ ಅಲ್ಲೀಖಾನ- ಹಣಕಾಸು.

೧೧. ಆಯ. ಆಯ. ಚುಂದ್ರಿಗಾರ
ವಾಣಿಜ್ಯ.

೧೨. ಅಬ್ದುಲ ರಾಬ ನಿಶ್ತಾರ
ಅಂಚೆ ಮತ್ತು ವಿಮಾನ.

೧೩. ಗಜನಫರ ಅಲ್ಲಿಖಾನ- ಆರೋಗ್ಯ.

೧೪. ಜೋಗೇಂದ್ರನಾಥ ಮಂಡಲ
ಕಾಯದೆ.

ಇದರಲ್ಲಿ ಮೊದಲಿನ ೬ ಜನ ಕಾಂಗ್ರೆಸ್ ಪ್ರತಿನಿಧಿಗಳು. ಮುಂದಿನ ಮೂವರು ಅಲ್ಪಸಂಖ್ಯಾಕ ವರ್ಗದವರು ಮತ್ತು ಕೊನೆಯ ಐವರು ಮುಸ್ಲಿಂ ಲೀಗ ಪ್ರತಿನಿಧಿಗಳು ಇರುವರು. ಜೋಗೇಂದ್ರನಾಥ ಮಂಡಲರು ಅಂಬೇಡಕರ ಪಕ್ಷದ ಹರಿಜನರಿದ್ದರೂ ಲೀಗಿನವರು ಅವರನ್ನು ತಮ್ಮ ಪ್ರತಿನಿಧಿಯೆಂದು ನಡುಗಾಲ ಸರಕಾರದಲ್ಲಿ ಸೇರಿಸಿಕೊಂಡಿರುವರು.

### ಪತ್ರವ್ಯವಹಾರ

ನಡುಗಾಲ ಸರಕಾರದಲ್ಲಿ ೧೪ ಮಂತ್ರಿಗಳನ್ನು ನೇಮಿಸಬೇಕು. ಇವರಲ್ಲಿ ಹರಿಜನರನ್ನು ಕೂಡಿಸಿ ೬ ಜನ ಕಾಂಗ್ರೆಸ್ಸಿಗರಿರಬೇಕು. ಈ ಹರಿಜನರನ್ನು ಮುಸ್ಲಿಂ ಲೀಗು ಒಪ್ಪದೆಂದಲ್ಲ, ಉಳಿದ ಐವರು ಕಾಂಗ್ರೆಸ್ಸಿಗರಲ್ಲಿ ಅವರಿಚ್ಛಿಸಿದ ಮುಸಲ್ಮಾನನಿರತಕ್ಕದ್ದಲ್ಲ. ಪ್ರಮುಖ ಜಾತೀಯ ವಿಷಯಗಳಲ್ಲಿ ಹಿಂದು ಅಥವಾ ಮುಸ್ಲಿಂ ಸದಸ್ಯರಲ್ಲಿ ಅರ್ಧದಷ್ಟು ಜನ ವಿರೋಧಿಸಿದರೆ ಆ ಬಗ್ಗೆ ಯಾವ ನಿರ್ಣಯವನ್ನೂ ಕೈಕೊಳ್ಳಬಾರದು. ಉಪಾಧ್ಯಕ್ಷ ಸ್ಥಳವನ್ನು ಸರತಿಯಂತೆ ಉಭಯ ಪಕ್ಷಗಳಿಗೂ ಕೊಡಬೇಕು. ಅಲ್ಪ ಸಂಖ್ಯಾಕ ಪಕ್ಷದ ಪ್ರತಿನಿಧಿಗಳ ಸ್ಥಳ ತೆರವು ಬಿದ್ದರೆ ಲೀಗಿನವರನ್ನು ಕೇಳಿ ಅವನ್ನು ತುಂಬಬೇಕು. ಮಹತ್ವದ ಖಾತೆಗಳನ್ನು ಉಭಯ ಪಕ್ಷಗಳಲ್ಲಿ ಸರಿಯಾಗಿ ಹಂಚಿ ಕೊಡಬೇಕು. ಉಭಯ ಪಕ್ಷಗಳ ಒಪ್ಪಿಗೆಯಿಲ್ಲದೆ ಮೇಲಿನ ವ್ಯವಸ್ಥೆಯಲ್ಲಿ ಯಾವ ಬದಲಾವಣೆಯನ್ನೂ ಮಾಡತಕ್ಕದ್ದಲ್ಲ. ವಾತಾವರಣ ತಿಳಿಯಾಗಿ ನಡುಗಾಲ ಸರಕಾರ ಸಂಪೂರ್ಣ ಪ್ರಸ್ಥಾಪಿತವಾಗುವವರೆಗೆ ದೀರ್ಘಾವಧಿ ಯೋಜನೆಯ ವಿಚಾರ ಮಾಡತಕ್ಕದ್ದಲ್ಲ. ಎಂಬಾಶಯದ ಪತ್ರವನ್ನು ಅಕ್ಟೋಬರ ೩ ಕ್ಕೆ ಬ್ಯಾ. ಜಿನ್ನಾರು ವೈಸರಾಯರಿಗೆ ಬರೆದರು. ವೈಸರಾಯರು ಮರುದಿನವೇ ಇದಕ್ಕೆ ಉತ್ತರ ಕೊಟ್ಟರು. ಜಿನ್ನಾರ ೯ ಬೇಡಿಕೆಗಳಿಗೆ ವ್ಹಾಯಿಸರಾಯರ ಉತ್ತರವಿಂತಿದೆ.

೧) ಒಪ್ಪಿಗೆ ೨) ನಿಮ್ಮ ಹೇಳಿಕೆಯನ್ನು ನೋಡಿದ್ದೇನೆ. ಆ ಹೊಣೆಗಾರಿಕೆ ನನ್ನದೇ ಆಗಿದೆ. ೩) ಇದಕ್ಕೆ ನಾನೊಪ್ಪಲಾರೆ. ಆಯಾ ಪಕ್ಷದವರು ತಮ್ಮ ತಮ್ಮ ಸದಸ್ಯರನ್ನು ಆರಿಸಲು ಸಂಪೂರ್ಣ ಅಧಿಕೃತರಿರುವರು; ಸ್ವತಂತ್ರರಿರುವರು. ೪) ಒಂದು ಪಕ್ಷದ ಪ್ರಬಲ ವಿರೋಧವಿದ್ದಾಗ ಧೋರಣದ ಮಹತ್ವದ ವಿಷಯವನ್ನು ನಿರ್ಣಯಿಸುವದು ಅಸಾಧ್ಯವಾಗುವದು. ಪರಸ್ಪರ ವಿಚಾರವಿನಿಮಯ ಸೌಹಾರ್ದದಿಂದ ನಿರ್ಣಯಿಸುವಲ್ಲಿಯೇ ಗೌರವವಿದೆ. ಸಮ್ಮಿಶ್ರ ಸರಕಾರ ಸೌಹಾರ್ದದಿಂದಾದರೂ ನಡೆಯಬೇಕು ಇಲ್ಲವೆ ಮುರಿದು ಬೀಳಬೇಕು. ೫) ಸರತಿಯಂತೆ ಉಪಾಧ್ಯಕ್ಷಪದವನ್ನು ಹಂಚುವದರಿಂದ ತೊಂದರೆಯಾಗುವದು. ನಾನೂ ಉಪಾಧ್ಯಕ್ಷರೂ ಇಲ್ಲದಿದ್ದಾಗ ಮಂತ್ರಿಮಂಡಳದ ಅಧ್ಯಕ್ಷತೆ ವಹಿಸಲು ಲೀಗದವರನ್ನೆ ಆರಿಸುವೆ. ಅಲ್ಲದೆ ಮಂತ್ರಿಮಂಡಳದ ಸಹಕಾರ ಸಮಿತಿಯ ಉಪಾಧ್ಯಕ್ಷ ಪದಕ್ಕೆ ಲೀಗಿನವರನ್ನು ಆರಿಸುವೆವು. ೬) ಅಲ್ಪಸಂಖ್ಯಾಕರ ಸ್ಥಳಗಳನ್ನು ತುಂಬುವಾಗ ಉಭಯ ಪಕ್ಷದವರನ್ನು ವಿಚಾರಿಸಲಾಗುವದು. ೭) ನಡುಗಾಲ ಸರಕಾರದಲ್ಲಿ ಈಗ ಎಲ್ಲ ಖಾತೆಗಳೂ ಅಷ್ಟೇ ಮಹತ್ವದ್ದಿದ್ದು ಅಲ್ಪಸಂಖ್ಯಾಕರಿಗೆ ಕೊಟ್ಟ ಖಾತೆಗಳಲ್ಲಿ ಬದಲಾವಣೆಯಾಗದು. ಜಗಜೀವನ ರಾಮರು ಕೂಲಿಕಾರ ಮಂತ್ರಿಗಳಾಗಿ ಉಳಿಯುವದು ವಿಹಿತ. ಉಳಿದ ಖಾತೆಗಳಲ್ಲಿ ಲೀಗಿನವರಿಗೆ ಸರಿಯಾಗಿ ಹಂಚಿ ಕೊಡಲಾಗುವದು ೮) ಒಪ್ಪಿದ್ದೇನೆ. ೯) ನಡುಗಾಲ ಸರಕಾರದಲ್ಲಿ ಸೇರುವದೆಂದರೇ ದೀರ್ಘಾವಧಿ ಯೋಜನೆಯನ್ನು ಒಪ್ಪಿದಂತೆ. ಆದುದರಿಂದ ಲೀಗ ಕಾರ್ಯಕಾರೀ ಮಂಡಳ ಬೇಗನೆ ಸೇರಿ ತನ್ನ ಮುಂಬಯಿ ನಿರ್ಣಯವನ್ನು ಪುನರ್ವಿಮರ್ಶಿಸುವದೆಂದು ನಂಬಿದ್ದೇನೆ.

### ಜಿನ್ನಾರವರ ಒಪ್ಪಿಗೆ

ವೈಸರಾಯರು ಬರೆದ ಪತ್ರಕ್ಕೆ ಜಿನ್ನಾರವರು ಅಕ್ಟೋಬರ ೧೩ ಕ್ಕೆ ಈ ಆಶಯದ ಪತ್ರ ಬರೆದರು. ಲೀಗ ಕಾರ್ಯಕಾರಿಮಂಡಳವು ನಿಮ್ಮ ಯೋಜನೆಯನ್ನು ಒಪ್ಪಿಲ್ಲ. ಈಗಿನ ನಿಮ್ಮ ನಿರ್ಣಯಗಳು ಅಗಷ್ಟ ೮ ನೇ ತಾರೀಕಿನ ಘೋಷಣೆಗೆ ವಿರುದ್ಧವಾಗಿವೆ. ಆದರೂ ಮುಸಲ್ಮಾನ ಹಿತದೃಷ್ಟಿಯನ್ನನುಲಕ್ಷಿಸಿ ಇಡಿ ಕೇಂದ್ರ ಸರಕಾರವನ್ನು ಕಾಂಗ್ರೆಸ್ಸಿನ ಕೈಗೆ ಒಪ್ಪಿಸಬಾರದೆಂದು ನಮ್ಮ ಐವರು ಪ್ರತಿನಿಧಿಗಳನ್ನು ಆರಿಸಿ ಕಳಿಸಲು ನಿರ್ಧರಿಸಿದ್ದೇನೆ. ನಮ್ಮ ಪ್ರತಿನಿಧಿಗಳನ್ನು ಕಳಿಸದಿದ್ದರೆ ಮುಸಲ್ಮಾನ ಪ್ರತಿನಿಧಿಗಳಲ್ಲದವರನ್ನು ಸರಕಾರದಲ್ಲಿ ಸೇರಿಸಿಕೊಳ್ಳಬೇಕಾಗುವದು. ಇದಲ್ಲದೆ ಬೇರೆ ಕೆಲ ಮಹತ್ವದ ವಿಷಯಗಳಿಗಾಗಿಯೂ ನಾವು ನಮ್ಮ ಪ್ರತಿನಿಧಿಗಳನ್ನು ಕಳಿಸಲು ನಿರ್ಧರಿಸಿದ್ದೇವೆಂದು ಮುಂತಾಗಿ ಬರೆದರು.

ವೈಸರಾಯರು ಇದಕ್ಕೆ ಮರುದಿನವೇ ಪತ್ರ ಬರೆದು ಸಂತೋಷ ಪ್ರದರ್ಶಿಸಿ ಕೂಡಲೆ ಹೆಸರು ಕಳಿಸಲು ಕೇಳಿಕೊಂಡರು. ಬ್ಯಾ. ಜಿನ್ನಾರವರು ತಮ್ಮ ಈ ಐದು ಹೆಸರುಗಳನ್ನು ತಿಳಿಸುವ ಪತ್ರವನ್ನು ೧೪ ನೇ ತಾರೀಕಿಗೆ ಬರೆದರು. ೧) ಲಿಯಾಕತ ಅಲ್ಲೀಖಾನ ೨) ಆಯ ಆಯ ಚುಂದ್ರಿಗಾರ ೩) ಅಬ್ದುಲ್ ರಾಬ ನಿಶ್ತಾರ ೪) ಗಜನಫರ ಅಲ್ಲೀಖಾನ ೫) ಜೋಗೇಂದ್ರನಾಥ ಮಂಡಳ.

### ಖಾತೆಗಳ ಹಂಚುವಿಕೆ

ವೈಸರಾಯರು ೨೫ಕ್ಕೆ ಬರೆದ ಪತ್ರದಲ್ಲಿ ಹಣಕಾಸು, ವಾಣಿಜ್ಯ, ಅಂಚೆ, ವಿಮಾನ, ಆರೋಗ್ಯ, ಕಾಯದೆ ಖಾತೆಗಳನ್ನು ಲೀಗಿನವರಿಗೆ ಕೊಡುವದಾಗಿ ಬರೆದರು. ನಿಮ್ಮ ಪ್ರತಿನಿಧಿಗಳಲ್ಲಿ ಯಾರಾರಿಗೆ ಯಾವಾವ ಖಾತಗಳನ್ನು ಕೊಡಬೇಕೆಂಬದನ್ನು ತಿಳಿಸಿದರೆ ಉಪಕೃತನಾಗುವೆನು. ಇಂದೇ ರಾತ್ರಿ ಅವರ ಪ್ರತಿಜ್ಞಾವಿಧಿ ಜರುಗಿದರೆ ನಾನವರನ್ನು ಸಂತೋಷದಿಂದ ಸ್ವಾಗತಿಸುವೆ ಎಂದು ಮುಂತಾಗಿ ಬರೆದರು. ಬ್ಯಾ. ಜಿನ್ನಾರು ಇದಕ್ಕೆ ಉತ್ತರ ಬರೆಯುತ್ತ ಖಾತೆಗಳ ಹಂಚಿಕೆ ನ್ಯಾಯ್ಯವಾಗಿ ನಡೆದಿಲ್ಲೆಂದು ವಿಷಾದಿಸುತ್ತೇನೆ. ನೀವು ನಿಮ್ಮ ಕೊನೆಯ ನಿರ್ಣಯ ಸ್ವೀಕರಿಸಿರುವದರಿಂದ ನಾವು ಹೆಚ್ಚಿಗೇನೂ ಹೇಳಬಯಸುವದಿಲ್ಲ. ಖಾತೆಗಳನ್ನು ಈ ರೀತಿಯಾಗಿ ಹಂಚಿ ಕೊಡಬೇಕೆಂದು ಸೂಚಿಸಿದರು. ಅವರ ಅಭಿಪ್ರಾಯದಂತೆ ಈಗ ಖಾತೆಗಳನ್ನು ಹಂಚಲಾಗಿದೆ.

### ಲಿಯಾಕತ ಅಲ್ಲೀಖಾನರ ಹೇಳಿಕೆ

ಈ ರೀತಿಯಾಗಿ ಲೀಗಿನವರು ನಡುಗಾಲ ಸರಕಾರದಲ್ಲಿ ಸೇರಿದ ಬಳಿಕವೂ ಅವರು ಅಸಹಕಾರ ಧೋರಣವನ್ನು ತಳೆದದ್ದು ವಿಷಾದಕರವಾಗಿದೆ. ಉಳಿದ ಮಂತ್ರಿಗಳೊಡನೆ ಸಹಕರಿಸಿ ಕೆಲಸ ಮಾಡುವದಾಗಿ ಒಪ್ಪಿದ್ದರೂ ಉಪಾಧ್ಯಕ್ಷರು ತಮ್ಮ ಮನೆಯಲ್ಲಿ ಕರೆದ ಮಂತ್ರಿಮಂಡಳದ ಸಭೆಗೆ ಬರಲು ಲಿಯಾಕತ ಅಲ್ಲೀಖಾನರು ನಿರಾಕರಿಸಿ ತಮ್ಮ ಮನೆಯಲ್ಲಿ ಆ ಸಭೆ ಕೂಡಿಸಬೇಕೆಂದು ಬರೆದರು. ಒಳಗೆ ಸೇರಿದ್ದರೂ ಸಹಕಾರ ಭಾವನೆ ಅವರಲ್ಲಿಲ್ಲೆಂದು ಇದರಿಂದ ಗೊತ್ತಾಗುವದು. ಲೀಗ ಧುರೀಣರಾದ ಲಿಯಾಕತ ಅಲ್ಲಿಖಾನರು ಪತ್ರಿಕಾ ಪರಿಷತ್ತಿನಲ್ಲಿ ತಮ್ಮ ಧೋರಣವನ್ನು ವಿವರಿಸುತ್ತ ಹೀಗೆ ಹೇಳಿದರು. ನಾವು ವಹಿಸಿಕೊಂಡಿರುವ ಕಾರ್ಯವು ಹೆಚ್ಚಿನ ಭಾರದ್ದೆಂಬುದು ನಮಗೆ ಗೊತ್ತಿದೆ. ಮುಸಲ್ಮಾನ ಹಿಂದುಸ್ತಾನದ ಹಾಗು ಈ ವಿಶಾಲ ಉಪಖಂಡದ ಜನರ ಹಿತಕ್ಕಾಗಿ ಲೀಗು ನಡುಗಾಲ ಸರಕಾರದಲ್ಲಿ ಸೇರಿದೆ. ಹಿಂದುಸ್ತಾನ ಒಂದು ರಾಷ್ಟ್ರವಲ್ಲ. ಅದು ವಿವಿಧ ಜನಾಂಗಗಳಿಂದ ಕೂಡಿದ ದೇಶ. ಎಲ್ಲ ಜನಾಂಗಗಳ ಪ್ರತಿನಿಧಿಗಳ ಸರಕಾರದವಾದ ಹೊರತು ಹಿಂದುಸ್ತಾನದಲ್ಲಿ ಶಾಂತಿ ಸೌಹಾರ್ದ ನೆಲಿಸವು. ಏಕಪಕ್ಷೀಯ ಸರಕಾರ ರಚಿಸುವದು ಸಾಧ್ಯವಿಲ್ಲ; ಹಾಗು ಉಚಿತವಲ್ಲ. ಕಾರ್ಯಕಾರೀ ಮಂಡಳದಲ್ಲಿಯ ನಮ್ಮ ಸಹಕಾರಿಗಳೊಡನೆ ಕೂಡಿಕೊಂಡು ಕೆಲಸ ಮಾಡುವದು ನಮ್ಮ ಉದ್ದೇಶ ಹಾಗು ನಿರ್ಧಾರವಿರುವದು. ಈ ಸರಕಾರವು ಕಲಹದ ಕಣವಾಗಬೇಕೆಂದು ನಮ್ಮ ಇಚ್ಛೆ ಇಲ್ಲ. ದೇಶದಲ್ಲಿ ಸಾಕಷ್ಟು ಜಗಳ ನಡೆದಿದ್ದು ಅದಾದರೂ ನಿಲ್ಲಬೇಕು. ಇಂದಿನ ತ್ವೇಷ ಅಳಿದು ಹೋಗಿ ಶಾಂತತೆ ಸ್ಥಾಪಿತವಾಗಬೇಕು. ನಾವು ಈ ಸರಕಾರದಲ್ಲಿ ಸೇರಿದ್ದೇವೆ ಹೊರಗೆ ಶಾಂತ ವಾತಾವರಣವುಂಟಾಗುವದೆಂದು ಆಸಿಸಿದ್ದೇವೆ.

ಜನಸಾಮಾನ್ಯರ ಪರಿಸ್ಥಿತಿ ಸುಧಾರಿಸುವದ್ದೆ ನಮ್ಮ ಮೊದಲನೆ ಕರ್ತವ್ಯ. ಈ ಹಿನ್ನೆಲೆಯಿಂದಲೆ ನಾವು ನಮ್ಮ ಧೋರಣ ನಿರ್ಧರಿ[ಸಿ]ದೆವು. ಈ ಸರಕಾರ ಸದ್ಯದ ಘಟನೆ[ಯ] ಮೇರೆಗೆ ರಚಿತವಾಗಿರುವದರಿಂದ ಸಂಯುಕ್ತ [illegible] ಇಲ್ಲವೆ ಸಾಮೂಹಿಕ ಜವಾಬದಾರಿಯ ಪ್ರಶ್ನೆ[ಯು] ಇರುವದಿಲ್ಲ. ಆದರೆ ಸರಕಾರದ ಪ್ರತಿಯೊಬ್ಬ ಮಂತ್ರಿಯು ಜನಸಾಮಾನ್ಯರ ಹಿತಕ್ಕಾಗಿ ಐಕ್ಯ ಹಾಗು ಸಹಕಾರದಿಂದ ಕಾರ್ಯ ಮಾಡಲು ನಿರ್ಧರಿಸಬೇಕು. ನಮ್ಮ ಪಕ್ಷದ ಲಾಭಕ್ಕಾಗಿ ನಾವು ಕಾರ್ಯ ಮಾಡದೆಬಿಟ್ಟರೆ ಜನರ ಹಿತಕ್ಕಾಗಿಯಾದರೂ ಮಾಡಬೇಕು. ಎಲ್ಲ ಮಂತ್ರಿಗಳು ಈ ಭಾವನೆಯಿಂದ ಕಾರ್ಯ ಮಾಡಹತ್ತಿದರೆ ಸರಕಾರ ಯಶಸ್ವಿಯಾಗುವದೆಂಬಲ್ಲಿ ಸಂದೇಹವಿಲ್ಲ. ಈ ಪ್ರಯೋಗ ಹೊಸದಿದ್ದು ಜಗತ್ತಿನಲ್ಲಿ ಎಲ್ಲಿಯೂ ಈ ತರದ ನಡುಗಾಲ ಸರಕಾರ ಇರುವದಿಲ್ಲ. ಈ ಸರಕಾರದ ಯಶಸ್ಸು ಅಪಯಶಸ್ಸು ಅದರ ಇತರ ಅಂಗಗಳನ್ನೂ ಅವಲಂಬಿಸಿದೆ. ಮುಸ್ಲಿಂ ಲೀಗೂ ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ಉಳಿದವರಷ್ಟೇ ಉತ್ಸುಕವಿದೆ. ಪರಕೀ[ಯರ] ಪ್ರಭುತ್ವ ಆದಷ್ಟು ಬೇಗ ಹೋಗುವದು ಲೀಗಿಗೂ ಬೇಕಾಗಿದೆ. ನಾವು ನಮ್ಮ ಅಧಿಕಾರದ ಅವಧಿಯಲ್ಲಿ ಜನರ ಪರಿಸ್ಥಿತಿಯನ್ನು ಸುಧಾರಿಸಲು ಶಕ್ತರಾಗುವೆವೆಂದು ಆಶೆಯಿದೆ. ಆದರೆ ನಾವು ಎಷ್ಟು ದಿನ ಇರುವೆವೊ ಹೇಳಲಿಕ್ಕೆ ಬಾರದು. ನಾನು ನನ್ನ ಭಾಷಣದಲ್ಲಿ ಪಾಕಿಸ್ತಾನ ಉಲ್ಲೇಖ ಮಾಡಿರದಿದ್ದರೂ ಈಗ ಹೇಳಿದ್ದೇ ಅದೇ ಇರುವದು. ಹಿಂದು ಮುಸಲ್ಮಾನರಿಗೆ ಸ್ವಾತಂತ್ರ್ಯ ಅಲ್ಪಸಂಖ್ಯಾಕರಿಗೆ ಆಶ್ವಾಸನ ಇವೆ ಪಾಕಿಸ್ತಾನದ ಮೂಲ.

### ಭೇದನೀತಿಯ ಬಗ್ಗೆ ಎಚ್ಚರಿಕೆ

ಬ್ರಿಟಿಶ್‌ರು ನಡೆಸಿರುವ ಭೇದನೀತಿಯ ಆಟದ ಬಗ್ಗೆ ಹಿಂದೀ ಮುಖಂಡರೆಲ್ಲ ಎಚ್ಚರದಿಂದ ಇರಬೇಕು. ಹಿಂದೀಯರಿಗೆ ಅಧಿಕಾರ ಕೊಟ್ಟು ಬಿಡಬೇಕೆಂಬ ಮನೀಷೆ ಅವರದಾಗಿಲ್ಲ. ಆದರೆ ಹೊಣೆಯನ್ನು ಮಾತ್ರ ನಮ್ಮ ಮೇಲೆ ಹೊರಿಸಬೇಕೆಂದಿದ್ದಾರೆ, ಎಂದು ಖಾನ ಅಬ್ದುಲ ಗಫರಖಾನರು ಒಂದು ಸಭೆಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಬ್ರಿಟಿಶ್‌ರು ಭಾರತದ ಪಕ್ಷಪಕ್ಷಗಳಲ್ಲಿ ವೈಮನಸ್ಸನ್ನು ಹೆಚ್ಚಿಸಿ ವಿಕೋ[illegible] ಒಯ್ದು ಭಾರತದ ಶಾಂತ ವಾತಾವರಣವನ್ನು ಅಲ್ಲೋಲ ಕಲ್ಲೋಲ ಮಾಡಿದ್ದಾರೆ. ಸಿಮ್ಲಾ ಪರಿಷತ್ತಿನ ಕಾಲದಿಂದಲೆ ಅವರು ಈ ಕಾಯಕವನ್ನು ನಡೆಸಿದ್ದಾರೆ. ಪ್ರತಿಸಲವೂ ಒಂದಿಲ್ಲೊಂದು ಬಗೆಯ ತೊಡಕನ್ನುಂಟು ಮಾಡುತ್ತಾರೆ. ಈ ನಡುಗಾಲ ಸರಕಾರ ಸ್ಥಾಪನೆಯ ಕಾಲಕ್ಕೂ ವೈಸರಾಯರು ಇದೇ ಆಟ ನಡೆಸಿದರು. ಕಾಂಗ್ರೆಸ್ಸು ನಡುಗಾಲ ಸ್ಥಾಪಿಸಲು ಸಿದ್ಧವಾಯಿತು. ಪಂಡಿತ ನೆಹರೂ ಜಿನ್ನಾರ ಕಡೆಗೆ ಹೋಗಿ ಅವರ ಸಹಕಾರ ಕೋರಿದರು. ಜಿನ್ನಾ ಅದಕ್ಕೊಪ್ಪಲಿಲ್ಲ. ನೆಹರೂ ನಡುಗಾಲ ಸರಕಾರ ಸ್ಥಾಪಿಸಿದ ಬಳಿಕ ಬ್ಯಾ ಜಿನ್ನಾ ಮತ್ತು ವೈಸರಾಯರಿಬ್ಬರಿಗೂ ಸಮಾಧಾನವಾಗಲಿಲ್ಲ. ಆಗ ಪರಸ್ಪರರು ವಿಚಾರವಿನಿಮಯ ನಡೆಸಿದರು. ಲೀಗು ನಡುಗಾಲ ಸರಕಾರದಲ್ಲಿ ಸೇರಲು ಒಪ್ಪಿತು. ಇಂಗ್ಲೀಷರ ಕೈವಾಡ [illegible]ರಲ್ಲಿದೆ ಎಂದು ಇದರಿಂದ ಸ್ಪಷ್ಟವಾಗು[ತ್ತದೆ]. ದೇಶದಲ್ಲಿ ಸದ್ಯಕ್ಕೆ ಹಬ್ಬಿದ ಅರಾಜಕತೆಯಲ್ಲಿಯೂ ಅವರ ಅಂಗವಿದ್ದೇ ಇದೆ. ಬ್ರಿಟಿಶ್‌ರ ಹೃದಯಪರಿವರ್ತನೆಯಾಗಿದೆಂಬ ಮಾತುಸುಳ್ಳು. ತೋರಿಕೆಯ ಅಧಿಕಾರ ಮಾತ್ರ ನಮಗೆ ದೊರೆತಿದೆ. ರಶಿಯಾಕ್ಕೆ ಬ್ರಿಟನು ಹೆದರುವದ[ರ] ಪರಿಣಾಮವಿದೆಂದು ಹೇಳಬಹುದು. (ಒಬ್ಬ ಸಾಮಾನ್ಯ ಪೊಲಿಟಿಕಲ್ ಏಜಂಟರ ಮಾತು ಕೇಳಿ ನಡುಗಾಲ ಸರಕಾರದ ಉಪಾಧ್ಯಕ್ಷರಾದ ಪಂಡಿತ ನೆಹರೂರವರಿಗೆ ಕಲ್ಲೆಸೆದು ಗಾಯ

—೧೪ನೇ ಪುಟಕ್ಕೆ

### ಪೌರ್ವಾತ್ಯ ರಾಷ್ಟ್ರ ಸುಲಿಯುವದಿಲ್ಲ

ಬ್ರಿಟಿಶ್ ಪರರಾಷ್ಟ್ರ ಮಂತ್ರಿಗಳಾದ ಬೆವಿನ್ನರು ಕಾಮನ್ಸ ಸಭೆಯಲ್ಲಿ ೨೨ ನೇ ತಾರೀಕು ಸರಕಾರದ ಪರರಾಷ್ಟ್ರ ಧೋರಣವನ್ನು ವಿವರಿಸಿ ಅದರ ಚರ್ಚೆಯನ್ನು ಪ್ರಾರಂಭಿಸಿದರು. ಇದೀಗ ಜಗತ್ತಿನಲ್ಲಿ ಮಹತ್ವದ ಘಟನೆಗಳು ನಡೆಯು[ತ್ತ]ಲಿದ್ದು ಭವಿಷ್ಯತ್ತಿನ ಶಾಂತಿ ಸುಖಗಳತ್ತ ಎ[ಲ್ಲ ರಾ]ಷ್ಟ್ರಗಳ ಲಕ್ಷ್ಯ ಹೊರಳಿದೆ. ಈ ಸಮ[ಯದ]ಲ್ಲಿ ಪ್ರಬಲ ರಾಷ್ಟ್ರಗಳಲ್ಲೊಂದಾದ ಬ್ರಿಟನ[ಿನ ಪ]ರರಾಷ್ಟ್ರ ಧೋರಣವನ್ನು ಚರ್ಚಿಸಿದ್ದು ಭವಿತವ್ಯವನ್ನು ತಿಳಿದುಕೊಳ್ಳಲು ಒಳ್ಳೆ ಸಹಾಯಕವಾಗಿದೆ. ಬೆವಿನ್‌ರು ಭವಿಷ್ಯತ್ತಿನ ಸಂಬಂಧದಲ್ಲಿ ಹೆಚ್ಚು ಆಶಾವಾದಿಗಳಾಗಿರುವದಿಲ್ಲ. ಪ್ರಬಲ ರಾಷ್ಟ್ರಗಳಲ್ಲಿ ಶಾಶ್ವತವಾದ ಒಡಂಬಡಿಕೆಯಾಗುವ ಆಸೆಯಿಲ್ಲೆಂದು ಸ್ಪಷ್ಟವಾಗಿ ನುಡಿದು ಆಶಾವಾದಿಗಳನ್ನೆಲ್ಲ ನಿರಾಶಗೊಳಿಸಿದರು. ಜಪಾನ ಮತ್ತು ಜರ್ಮನಿಗಳು ಮತ್ತೆ ತಲೆ ಎತ್ತಿ ದಾಳೀಗ ರಾಷ್ಟ್ರಗಳಾಗದಂತೆ ನೋಡಿಕೊಳ್ಳುವದತ್ಯವಶ್ಯವೆಂದು ಅವರು ಪ್ರತಿಪಾದಿಸಿದರು. ಜಪಾನರನ್ನೆಲ್ಲ ನಿಃಶಸ್ತ್ರಗೊಳಿಸಲಾಗಿದ್ದು ಇನ್ನು ಮುಂದೆ ದಾಳಿಗರಾಷ್ಟ್ರವಾಗುವ ಸಾಧನ ಸೌಕರ್ಯಗಳು ಅವರಿಗೆ ಸಿಕ್ಕದಂತೆ ನೋಡಿಕೊಳ್ಳಬೇಕು. ಬೆವಿನ್‌ರು ಇಂಡೋನೇಶಿಯಾದ ಬಗ್ಗೆ ಮಾತಾಡುತ್ತ ನವಂಬರ ೩೦ ಕ್ಕೆ ಅಲ್ಲಿನ ಬ್ರಿಟಿಶ್ ಸೈನ್ಯವನ್ನೆಲ್ಲ ಹಿಂತೆಗೆದುಕೊಳ್ಳಬೇಕೆಂದು ಕೊನೆಯದಾಗಿ ನಿರ್ಧರಿಸಲಾಗಿದೆಂದು ಹೇಳಿ ಅಷ್ಟರಲ್ಲಿ ಅಲ್ಲಿನ ಪಕ್ಷಗಳಲ್ಲಿ ಒಡಂಬಡಿಕೆಯಾಗಬೇಕೆಂದು ಆಶಿಸಿದರು. ದುರ್ಬಲ ರಾಷ್ಟ್ರ[ಗಳ] ಸಂರಕ್ಷಣೆಯ ಹೊಣೆಯನ್ನು ಪ್ರಬಲ [ರಾಷ್ಟ್ರ]ಗಳು ಹೊತ್ತಿವೆಂದು ಇದೀಗ ಜನಜನಿತ[ವಾ]ಗಿದೆ. ಇಂಥ ಅಲ್ಪ ರಾಷ್ಟ್ರಗಳ ಧೋರಣದ ಸಂಬಂಧದಲ್ಲಿ ಪ್ರಬಲ ರಾಷ್ಟ್ರಗಳಲ್ಲಿ ಭಿನ್ನಾಭಿಪ್ರಾಯವಾದರೆ ಆ ರಾಷ್ಟ್ರಗಳ ಹಣೆಬರಹವೇ ಹಾಳಾಗುವದು, ಬೆವಿನ್‌ರೂ ಈ ಬಗ್ಗೆ ಹೇಳುತ್ತ ಇರಾಣವು ಪರರಾಷ್ಟ್ರಗಳ ಕೈವಾಡಕ್ಕೊಳಗಾಗದೆ, ಸ್ವಾತಂತ್ರ್ಯವನ್ನು ಪಡೆಯುವಂತೆ ಸಂಘಟಿತವಾಗಲಿ. ಐಕ್ಯವನ್ನು ಹೊಂದಲಿ ಎಂದು ಹಾರಯಿಸಿದರು. ಡಾರ್ಡನಲ್ಸದಲ್ಲಿ ತಮ್ಮದೊಂದು ಠಾಣೆಯಿರಬೇಕೆಂಬ ರಶಿಯದ ಬೇಡಿಕೆಯನ್ನು ಒಪ್ಪಿದರೆ ಟರ್ಕಿಯ ಪ್ರಭುತ್ವದಲ್ಲಿ ಅನುಚಿತವಾಗಿ ಕೈಹಾಕಿದಂತಾಗುವದೆಂದು ಬೆವಿನ್‌ರು ಹೇಳಿದರು. ಇಂಥ ಪ್ರಶ್ನೆಗಳ ಸಂಬಂಧದಲ್ಲಿ ಮಾಡಲ್ಪಟ್ಟ ಪಾಟ್ಸಡ್ಯಾಂ ಒಡಂಬಡಿಕೆ ಕೈಗೂಡಿದ್ದು ಅಂತರ್‌ರಾಷ್ಟ್ರೀಯ ಪರಿಷತ್ತಿನಲ್ಲಿ ಉದ್ದಿಷ್ಟವನ್ನು ಸಾಧಿಸಲು ಬ್ರಿಟನ್ ಶಕ್ಯವಿದ್ದಷ್ಟು ಪ್ರಯತ್ನ ಮಾಡುವದಾಗಿ ಹೇಳಿದರು. ಬ್ರಿಟಿಶ್ ಸಾಮ್ರಾಜ್ಯತ್ವದ ವಿರುದ್ಧ ನಡೆದ ಅಪಪ್ರಚಾರದ ಬಗ್ಗೆ ಬೆವಿನ್‌ರು ತಮ್ಮ ಧೈರ್ಯ ಸ್ಥೈರ್ಯ ತಾಳ್ಮೆ ತಮಗೆ ತಕ್ಕ ಬಹುಮಾನ ತರುತಿವೆ. ಇದೆಲ್ಲ ದಾಳಿ ಒಂದೇ ಕಡೆಯಿಂದ ಬರುವದಿಲ್ಲ ಎಂದೂ ಹೇಳಿದರು. ಗ್ರೀಸದ ಆರ್ಥಿಕಾಭಿವೃದ್ಧಿಗಾಗಿ ಎಂದಿನಂತೆ ಪ್ರಯತ್ನಿಸುವುದಾಗಿ ಸಾರಿದರು. ಆದರೆ ಆ ರಾಷ್ಟ್ರದ ಕಾರ್ಯಕಲಾಪಗಳಲ್ಲಿ ತಾವು ಯಾವದೇ ಬಗೆಯಾಗಿ ಕೈಹಾಕುವುದಿಲ್ಲೆಂದೂ ಆ ಬಗ್ಗೆ ನಡೆದ ಪ್ರಚಾರ ಕೇವಲ ಅಪಪ್ರಚಾರವೆಂದೂ ಅವರು ಹೇಳಿ ಗ್ರೀಸದಲ್ಲಿಯ ತಮ್ಮ ಸೈನಿಕರನ್ನು ಶಕ್ಯವಿದ್ದಷ್ಟು ಬೇಗ ಹಿಂತೆಗೆದುಕೊಳ್ಳುವುದಾಗಿ ಹೇಳಿದರು. ಇಜಿಪ್ತದಲ್ಲಿಯ ಮತಭೇದಗಳೆ ಅಲ್ಲಿನ ಮಾತುಕತೆಗಳಿಗೆ ಅಡ್ಡಿಯಾಗಿವೆ. ಸುಲಿಗೆ ಮಾಡಲು ಇಲ್ಲವೆ ಮಧ್ಯಪೂರ್ವದ ಜನತೆಯನ್ನು ಹತ್ತಿಕ್ಕಲು ತಾವು ಬಯಸುತಿರುವೆವೆಂದು ಹೇಳುವುದು ತೀರ ಹುಚ್ಚುಚ್ಚಾರ ಎಂದೂ ಹೇಳಿದರು.

### ಮಾತಿನಂತೆ ಕೃತಿ ಬೇಕು

ಬೆವಿನ್ನರು ಈ ಸಲ ಚಪಲಕ್ಕೊಳಗಾಗದೆ ಒಳ್ಳೆ ಎಚ್ಚರಿಕೆಯಿಂದ ಮಾತಾಡಿರುವರೆಂದು ತೋರುತ್ತದೆ. ಅಂತರ್‌ರಾಷ್ಟ್ರೀಯ ಪ್ರಶ್ನೆಗಳ ಸಂಬಂಧದಲ್ಲಿ ರಶಿಯಾ, ಬ್ರಿಟನ್ ಅಮೇರಿಕೆಗಳಲ್ಲಿ ತಿಕ್ಕಾಟ ನಡೆದಿದ್ದು ಮೂರನೇ ಮಹಾಯುದ್ಧವೆಲ್ಲಿ ಪ್ರಾರಂಭವಾಗುವದೊ ಎಂಬ ಭೀತಿಯುಂಟಾಗಿದೆ. ಈ ಮೂರು ರಾಷ್ಟ್ರಗಳಲ್ಲಿ ಒಂದು ಬಗೆಯ ಐಕ್ಯವಾಗಿ ಅಂತರ್‌ರಾಷ್ಟ್ರೀಯ ಸಮಸ್ಯೆಗಳಲ್ಲಿ ಸ್ವಾರ್ಥವನ್ನಿಟ್ಟುಕೊಳ್ಳದೆ ಅವನ್ನು ಬಿಡಿಸಲಿಕ್ಕೆ ಪ್ರಯತ್ನಿಸಿದರೆ ಜಾಗತಿಕ ಶಾಂತಿ ಸುಖ ಸುಭದ್ರವಾಗುವವು. ಪೂರ್ವರಾಷ್ಟ್ರಗಳನ್ನು ಸುಲಿಯುವ ಮನೀಷೆ ತಮ್ಮದಾಗಿದೆಂದು ನಡೆದ ಪ್ರಚಾರ ಕೇವಲ ಅಪಪ್ರಚಾರವೆಂದು ಬೆವಿನ್ನರು ನುಡಿದರು. ಆದರೆ ಅವರೀ ಮಾತು ಕೃತಿಯಲ್ಲಿ ಇಳಿಯಬೇಕಾದುದು ಅವಶ್ಯವಾಗಿದೆ. ಇಜಿಪ್ತ ಇಂಡೋನೇಶಿಯಾ ಸಂಬಂಧದಲ್ಲಿ ಅಷ್ಟೇ ಏಕೆ ಹಿಂದುಸ್ತಾನದ ಸಂಬಂಧದಲ್ಲಿಯೂ ಬ್ರಿಟಿಶರು ಅಂತರಿಕ ಮತಭೇದ ತಿಕ್ಕಾಟಗಳನ್ನೆ ಮುಂದೆ ಮಾಡಿ ತಮ್ಮ ಪ್ರಸ್ಥವನ್ನು ಬೆಳಿಸಲು ಇಲ್ಲವೆ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಈಗಲೂ ಪ್ರಯತ್ನಿಸುವುದುಂಟು. ಆಯಾ ರಾಷ್ಟ್ರಗಳ ಸಂರಕ್ಷಣೆಯ ಹೊಣೆಯೇನು ಕಾಯಂವಾಗಿ ಬ್ರಿಟಿಶ್‌ರ ಮೇಲಿಲ್ಲ. ಅಲ್ಲಲ್ಲಿನ ಪಕ್ಷ ಪಂಗಡಗಳು ಮಧ್ಯಸ್ತರ ಕೈವಾಡವಿಲ್ಲದಿದ್ದರೆ ಕೆಲ ಸಮಯಮಾತ್ರ ಹೊಡೆದಾಡಬಹುದು ಆದರೆ ಮುಂದೆ ಅವರಲ್ಲಿ ಐಕ್ಯ ತಾನಾಗಿಯೇ ಉಂಟಾಗುವದು. ಬ್ರಿಟಿಶರು ಮತ್ತು ಉಳಿದ ಪ್ರಬಲ ರಾಷ್ಟ್ರಗಳು ಈ ಮಾತನ್ನು ಬೇಗ ತಿಳಿದುಗೊಂಡಷ್ಟು ಹಿತಕರ. ಟರ್ಕಿಯಲ್ಲಿ ಅರಬ ಯಹೂದಿ ಸಮಸ್ಯೆ ಬಡನೇ ಕಾಯಿ ಭೂತಮಾಡಿ ಬ್ರಿಟಿಶರು ತಮ್ಮ ಬೇಳೆ ಬೆಯಿಸಿಕೊಳ್ಳುವದು ಯಾರಿಗಾದರೂ ಹೊಳೆಯದಿರದು. ಅಂತರ್ ರಾಷ್ಟ್ರೀಯ ಶಾಂತಿಯನ್ನು ಜಪಿಸುತ್ತಿರುವ ಈ ಪ್ರಬಲ ರಾಷ್ಟ್ರಗಳು ಅಂತಃಶುದ್ಧಿಯನ್ನು ಸಾಧಿಸಿಕೊಂಡು ಪ್ರಯತ್ನಿಸಿದಾದರೆ ಉದ್ದಿಷ್ಟ ಸಾಧಿಸುವುದೆಂಬಲ್ಲಿ ಸಂದೇಹವಿಲ್ಲ.

# ಅಂತರ್‌ರಾಷ್ಟ್ರೀಯ

### ಜರ್ಮನನೈಋತ್ಯ ಆಫ್ರಿಕಾ

ದಕ್ಷಿಣ ಆಫ್ರಿಕಾ ಸರಕಾರದವರು ಜನರಲ್ ಸ್ಮಟ್ಸರ ನೇತೃತ್ವದಲ್ಲಿ ಅಲ್ಲಿನ ಹಿಂದೀಯರನ್ನು ಎಷ್ಟು ಕೆಟ್ಟರೀತಿಯಿಂದ ನಡಿಸಿಕೊಳ್ಳುತ್ತಿರುವರೆಂಬುದು ಸರ್ವಶ್ರುತ. ಅಲ್ಲಿನ ಹಿಂದೀಯರು ಈ ದಬ್ಬಾಳಿಕೆ ಅನ್ಯಾಯದ ವಿರುದ್ಧ ಹೋರಾಟವನ್ನು ನಡೆಸಿದ್ದೂ ಜನ ಜನಿತವಾಗಿದೆ. ಸ್ಮಟ್ಸ ಸರಕಾರದ ಮತ್ತು ಅಲ್ಲಿರುವ ಬಿಳಿಯರ ಈ ದುರಾಗ್ರಹ ಆಡಳಿತೆಗೆ ವರ್ಣದ್ವೇಷ, ಸ್ವಾರ್ಥ ಮೊದಲಾದ ಕಾರಣಗಳೆ ಮುಖ್ಯವಾಗಿವೆ. ಕಪ್ಪು ವರ್ಣದವರು ಪಶುಸಮಾನರು, ಅವರಿಗೆ ನಾಗರಿಕ ಮೂಲಭೂತ ಹಕ್ಕುಗಳು ಕೂಡ ಇರಬಾರದಂತೆ ನೂರಾರು ವರ್ಷಗಳಿಂದ ದಕ್ಷಿಣ ಆಫ್ರಿಕೆಯಲ್ಲಿನೆಲಿಸಿ ಅಲ್ಲಿನ ಸಂಪದಭಿವೃದ್ಧಿಗೆ ತಮ್ಮ ರಕ್ತವನ್ನು ಸುರಿಸಿದ ಹಿಂದೀಯರು ಇಂದು ಅಲ್ಲಿ ತಮ್ಮದೆಂಬ ಯಾವ ಆಸ್ತಿಯನ್ನೂ ಮಾಡಿಕೊಳ್ಳಲಾರರು. ಬಿಳಿಯರಿರುವಲ್ಲಿ ವಾಸಿಸಲು ಕೂಡ ಅವರು ಅನರ್ಹರು ಎಂದು ಮುಂತಾಗಿ ದಕ್ಷಿಣ ಆಫ್ರಿಕೆಯಲ್ಲಿಯ ಬಿಳಿಯರ ದುರಾಗ್ರಹ ದಕ್ಷಿಣ ಆಫ್ರಿಕೆಯಲ್ಲಿ ಇಷ್ಟೊಂದು ಪ್ರತಿಗಾಮಿ ಧೋರಣದಿಂದ ಆಡಳಿತ ಸಾಗಿಸುತ್ತಿರುವಾಗ ಅವರು ಈಗ ಜರ್ಮನ್ ನೈಋತ್ಯ ಆಫ್ರಿಕೆಯ ಪ್ರಭುತ್ವವನ್ನು ಬೇಡುತಿರುವರು. ಅಲ್ಲಿನ ಮೂಲ ನಿವಾಸಿಗಳ ಅನುಮತಿಯೂ ತಮ್ಮ ಪ್ರಭುತ್ವಕ್ಕೆ ದೊರೆತಿದೆಂದು ಜನರಲ್ ಸ್ಮಟ್ಸ ಸರಕಾರದ ಹೇಳಿಕೆ ದಕ್ಷಿಣ ಆಫ್ರಿಕೆಯಲ್ಲಿಯ ಸ್ಮಟ್ಸ ಸರಕಾರದ ಆಡಳಿತದ ಕಟು ಅನುಭವ ಪಾಪ ಜರ್ಮನ್ ನೈಋತ್ಯ ಆಫ್ರಿಕೆಯ ಮೂಲ ನಿವಾಸಿಗಳಿಗೆ ಅದೆಂತು ಗೊತ್ತಾಗಬೇಕು? ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರು ಮೂಲಭೂತ ಹಕ್ಕುಬಾಧ್ಯತೆಗಳನ್ನು ಸಂಪಾದಿಸಿ ಕೊಳ್ಳುವುದಕ್ಕಾಗಿ ಸತ್ಯಾಗ್ರಹವನ್ನು ನಡೆಸಿದ್ದು ನೈಋತ್ಯ ಆಫ್ರಿಕನ್‌ರಿಗೆ ಗೊತ್ತಾಗಿದ್ದರೆ ಸ್ಮಟ್ಸ ಸರಕಾರದ ಪ್ರಭುತ್ವಕ್ಕೆ ಎಂದಿಗೂ ಒಪ್ಪುತಿರಲಿಲ್ಲ. ಸ್ಮಟ್ಸ ಸರಕಾರದ ಈ ಬೇಡಿಕೆಗೆ ಬ್ರಿಟಿಶ ಸರಕಾರದವರು ಒಪ್ಪಿಗೆಯಿತ್ತಿದು ಆಶ್ಚರ್ಯಕರವಾಗಿದೆ. ಆದರೆ ಈ ಸಂಬಂಧದಲ್ಲಿ ಬ್ರಿಟಿಶ ಕೂಲಿಕಾರ ಪಕ್ಷದಲ್ಲಿ ಮತ್ತೈಕ್ಯವಿಲ್ಲದಿದ್ದುದು ಸಮಾಧಾನಕರವಾಗಿದೆ. ಅಟ್ಲಿಯವರು ಕಾಮನ್ಸದಲ್ಲಿ ಸ್ಮಟ್ಸ ಸರಕಾರದ ಈ ಜಾಣತನದ ಕ್ರಮವನ್ನು ಬಣ್ಣಿಸುತಿರುವಾಗಲೆ ಕೂಲಿಕಾರ ಸದಸ್ಯರೊಬ್ಬರು ಎದ್ದು ಮೂಲ ನಿವಾಸಿಗಳ ಮಾತನ್ನು ತಿಳಿದುಕೊಳ್ಳಲು ಸ್ವತಂತ್ರ ಜನರಿಗೆ ಅಪ್ಪಣೆ ಕೊಡಲಿಲ್ಲ. ಲಾರ್ಡ ಹೇಲೆಯಂಥವರಿಗೆ ಕೂಡ ಅಪ್ಪಣೆ ನಿರಾಕರಿಸಲಾಯಿತು ಈ ಮಾತಾಡುವಾಗ ಗೊತ್ತಿದೆಯೇ ಎಂದು ಪ್ರಶ್ನಿಸಿದಾಗ ಮುಖ್ಯ ಮಂತ್ರಿಗಳು ಇಲ್ಲ ಎಂದು ಉತ್ತರ ಕೊಟ್ಟು ಜಾರಿಕೊಂಡರು. ಸ್ಮಟ್ಸರ ಆಡಳಿತವನ್ನು ಕಂಡುಂಡವರೂ ಇನ್ನೊಂದು ಭಾಗವನ್ನು ಅವರಾಡಳಿತಕ್ಕೊಪ್ಪಿಸಬೇಕೆಂದೂ ಹೇಳಿದರು. ಜರ್ಮನ್ ಆಫ್ರಿಕೆಯ ಕಲ್ಯಾಣ ಬಯಸುತಿದ್ದರೆ ಅಲ್ಲಿನ ಆಡಳಿತೆಯ ಭಾರವನ್ನು ಯುಕ್ತ ರಾಷ್ಟ್ರ ಮಂಡಳದವರು ಹೊರುವದವಶ್ಯ. ಸ್ವಾರ್ಥವಿರಹಿತ ರಾಷ್ಟ್ರವು ಈ ಭಾರವನ್ನು ಹೊರಬಹುದು. ಜನರಲ್ ಸ್ಮಟ್ಸರ ಈ ಬೇಡಿಕೆಯನ್ನು ಬೇರೆ ಯಾವ ರಾಷ್ಟ್ರವು ಒಪ್ಪದೆಂಬುದು ನಿರ್ವಿವಾದವಾಗಿದೆ.

### ಸುದಾನ ಸಮಸ್ಯೆ ಬಗೆಹರಿಯಿತು?

ಸುದಾನ ಸಂಬಂಧದಲ್ಲಿ ಬ್ರಿಟಿಶ ಸರಕಾರ ಮತ್ತು ಇಜಿಪ್ತ ಸರಕಾರಗಳಲ್ಲಿ ತಿಕ್ಕಾಟ ನಡೆದಿದ್ದಿತಷ್ಟೆ. ಈ ಬಗ್ಗೆ ಬ್ರಿಟಿಶ್ ಪರರಾಷ್ಟ್ರ ಮಂತ್ರಿ ಬೆವಿನ್ ಮತ್ತು ಇಜಿಪ್ತದ ಮುಖ್ಯ ಮಂತ್ರಿ ಇಸ್ಮಾಯಿಲ್ ಸಿದ್ದಿಕಿಪಾಶಾ ಇವರಲ್ಲಿ ಕಳೆದ ಎಂಟು ದಿನಗಳಿಂದ ನಡೆದ ಚರ್ಚೆ ಸಮಾಧಾನಕರವಾಗಿ ಬಗೆಹರಿಯಿತೆಂದು ಸುದ್ದಿ ಬಂದಿದೆ. 'ಇಜಿಪ್ತದಲ್ಲಿ ಸುದಾನ ಸೇರುವಂತೆ ಮಾಡುವೆ ಎಂದು ಒಂದು ತಿಂಗಳಹಿಂದೆ ನಾನು ನುಡಿದಿದೆ ಈಗ ಆ ಮಾತಿನಲ್ಲಿ ಇಜಿಪ್ತ ಮತ್ತು ಸುದಾನಗಳಲ್ಲಿ ಒಮ್ಮತವಾಗಿದೆ, ಎಂದು ಈಗ ಹೇಳಬಯಸುವೆ ಎಂದು ಪಾಶಾರವರು ೨೬ ನೇ ತಾರೀಕು ರಾಯ್ಟರ ಸುದ್ದಿಗಾರನಿಗೆ ತಿಳಿಸಿದರು. ಇದರಲ್ಲಿ ದೊರೆತ ಯಶಸ್ಸು ಮಿತವಾಗಿದ್ದರೂ ಇಜಿಪ್ತ ಸರಕಾರ ಒಂದು ಹೆಜ್ಜೆ ಮುಂದಿಟ್ಟಿತೆಂದು ಹೇಳಲಡ್ಡಿಯಿಲ್ಲ; ಆದರೆ ಈ ಒಡಂಬಡಿಕೆಗೆ ಕೈರೋದಲ್ಲಿರುವ ಇಜಿಪ್ತ ಶಿಷ್ಟಮಂಡಳದ ಒಪ್ಪಿಗೆ ದೊರಕಿಸುವದೊಂದು ಮಹತ್ವದ ಸಮಸ್ಯೆಯಾಗಿದೆ. ಅಲ್ಲಿಯ ವರೆಗೆ ಇದರ ವಿವರಗಳು ತಿಳಿಯುವುದು ಕಠಿಣವಾಗಿವೆ ಇಜಿಪ್ತದಲ್ಲಿ ಬ್ರಿಟಿಶ ಸೈನ್ಯ ಎಷ್ಟು ದಿನಗಳ ವರೆಗೆ ಇರಬೇಕೆಂಬುದೆಂದು ಆ್ಯಂಗ್ಲೊ-ಇಜಿಪ್ತದ ತಿಕ್ಕಾಟದ ಕಾರಣವಾಗಿ ಅಂಗ್ಲೊ-ಇಜಿಪ್ತದ ಒಡಂಬಡಿಕೆಯ ಕಾಲಕ್ಕೆ ಇವೆಲ್ಲ ಸಮಸ್ಯೆಗಳು ಸಮಾಧಾನಕರವಾಗಿ ಬಗೆಹರಿಯಬಹುದೆಂದು ಆಶಿಸಲಾಗಿದೆ.

### ಯುಕ್ತರಾಷ್ಟ್ರ ಸಂಘಟನೆ

ಯುಕ್ತರಾಷ್ಟ್ರ ಸಂಘದ ಸಭೆ ಫ್ಲಶಿಂಗ (ನ್ಯೂಯಾರ್ಕ) ದಲ್ಲಿ ೨೩ ನೇ ತಾರೀಕಿನಿಂದ ಪ್ರಾರಂಭವಾಗಿದೆ. ಅಮೇರಿಕೆಯ ಅಧ್ಯಕ್ಷ ಟ್ರೂಮನ್‌ರು ಸ್ವಾಗತ ಭಾಷಣ ಮಾಡುತ್ತ 'ಯುದ್ಧದ ಬೆದರಿಕೆಯಿಂದ ಇಂದು ಮುಕ್ತಿ ದೊರೆತಿದೆಂದು ಹೇಳಬಲ್ಲೆ. ಎಲ್ಲ ರಾಷ್ಟ್ರಗಳ ಸಹಕಾರದಿಂದ ಅಂದರೆ ಯುಕ್ತರಾಷ್ಟ್ರ ಸಂಘದ ಮುಖಾಂತರ ಶಾಂತಿಯನ್ನು ಸ್ಥಾಪಿಸುವ ವಿಶ್ವಾಸವಿದೆ' ಎಂದು ಹೇಳಿದರು. ಅಮೇರಿಕೆ ಪ್ರತ್ಯೇಕೀಕರಣ ಧೋರಣ ಇಟ್ಟುಕೊಂಡಿಲ್ಲೆಂಬುದಕ್ಕೆ ಈ ಸಭೆಯ ಸಾಕ್ಷಿ. ಅಮೇರಿಕನರು ಪ್ರಚಂಡ ಬಹುಮತದಿಂದ ಯುಕ್ತರಾಷ್ಟ್ರ ಸಂಘಕ್ಕೆ ಬೆಂಬಲ ಕೊಡುತ್ತಿದ್ದಾರೆ. ಜಗತ್ತಿನ ಶಾಂತಿಗಾಗಿ ಅದು ಸಂಪೂರ್ಣ ಸಹಾಯ ಮಾಡದಿರದು. ಜಾಗತಿಕ ಶಾಂತಿಗಾಗಿ ಹೆಣಗುವ ರಾಷ್ಟ್ರಗಳಲ್ಲಿಯೆ ಎರಡು ಬಣಗಳಾದರೆ ಇಡೀ ಜಗತ್ತಿಗೇ ಗಂಡಾಂತರ ಬಂದೊದಗುವದು. ಪೂರ್ವ ಪಶ್ಚಿಮ ರಾಷ್ಟ್ರಗಳ ವಿವಾದಾತ್ಮಕ ವಿಷಯಗಳನ್ನು ಚರ್ಚಿಸುವ ನಾವು ನಮ್ಮ ಸಾಮಾಜಿಕ ಆರ್ಥಿಕ ಮತಭೇದಗಳನ್ನು ಜಾಗತಿಕ ಶಾಂತಿಯ ಮಾರ್ಗದಲ್ಲಿ ಈಗಾಗಲೆ ಇನ್ನು ಮುಂದೆ ಎಂದೇ ಆಗಲಿ ತಂದೊಡ್ಡಬಾರದು. ಎಂದು ಹೇಳಿ ಭಾವೀ ಯುದ್ಧದ ಸಂಬಂಧದಲ್ಲಿ ಹೀಗೆ ಹೇಳಿದರು. ಯುದ್ಧ ಯಾವ ರಾಷ್ಟ್ರಕ್ಕೂ ಬೇಕಾಗಿಲ್ಲ. ಇನ್ನೊಂದು ಯುದ್ಧವಾಗುವುದು ಖಂಡಿತ ಎಂದು ಹಬ್ಬಿದ ಸುದ್ದಿ ನಿರಾಧಾರವಾಗಿದೆ. ಜಗತ್ತಿನಲ್ಲಿ ಎಲ್ಲಿಯಾದರೂ ಹಿಂಸೆ ಅತ್ಯಾಚಾರ ಆಕ್ರಮಣಗಳು ಕಂಡು ಬಂದರೆ ಅವನ್ನು ಹತ್ತಿಕ್ಕಲು ಅಮೇರಿಕೆಯು ಯುಕ್ತ ರಾಷ್ಟ್ರ ಸಂಘಕ್ಕೆ ಸರ್ವ ರೀತಿಯಿಂದಲೂ ಸಹಾಯ ನೀಡುವ ಭರವಸೆ ಕೊಡುತ್ತೇನೆ. ಹೊಸ ಸದಸ್ಯರ ಆಯ್ಕೆ, ಭದ್ರತಾ ಮಂಡಳವು ಕಳೆದ ಐಳು ತಿಂಗಳು ನಡೆಸಿದ ಕಾರ್ಯದ ವರದಿಯ ಪರಿಶೀಲನೆ ವಿಶಸ್ತ ಪ್ರದೇಶಗಳು, ನಿರಾಶ್ರಿತ ಯುರೋಪಿಯನ್‌ರ ವಿಚಾರ, ಚಿಕ್ಕರಾಷ್ಟ್ರ ದೊಡ್ಡ ರಾಷ್ಟ್ರಗಳ ನಿಷೇಧಾಧಿಕಾರ ಕಸಿದುಕೊಳ್ಳಲೆತ್ನಿಸುವದು ಮುಂತಾದ ವಿಷಯಗಳ ಬಗ್ಗೆ ಆರು ವಾರ ನಡೆಯುವ ಈ ಸಭೆಯಲ್ಲಿ ಮತಭೇದವಾಗುವ ಸಂಭವವಿದೆ. ಆದರೂ ಅಮೇರಿಕೆ ಶಾಂತಿ ಸ್ಥಾಪನೆಯ ವಿಷಯದಲ್ಲಿ ಸಂಪೂರ್ಣ ಸಹಾಯ ಸಲ್ಲಿಸುವದು. ಪರಮಾತ್ಮನ ಕೃಪೆಯಿಂದ ನಾವೆಲ್ಲ ನಮ್ಮ ಕಾರ್ಯದಲ್ಲಿ ಯಶಸ್ವಿಯಾಗೋಣ ಎಂದು ಮುಂತಾಗಿ ಹೇಳಿದರು. ಅಮೇರಿಕೆಯಂಥ ಪ್ರಬಲ ರಾಷ್ಟ್ರದ ಅಧ್ಯಕ್ಷರು ಈ ರೀತಿ ಶಾಂತಿ ಸಂದೇಶವನ್ನು ಬೀರಿದ್ದು ನಿಜವಾಗಿಯೂ ಸಂತೋಷಪ್ರದವಾಗಿದೆ. ಅಮೇರಿಕೆ ಸರಕಾರದವರು ಮತ್ತು ಅವರಂತೆ ಉಳಿದ ಪ್ರಬಲ ಸರಕಾರಗಳು ಇದೇ ಬಗೆಯ ಉಚ್ಚ ಧೋರಣೆಯಿಂದ ಪ್ರೇರಿತವಾಗಿ ಜಾಗತಿಕ ಶಾಂತಿಗಾಗಿ ಹೆಣಗಿದರೆ ಯುದ್ಧದ ಕಾರ್ಮೋಡ ಬಯಲಾಗಿ ಶಾಂತಿ ಸೌಹಾರ್ದ ನೆಲಿಸಬಹುದು.

### ದಕ್ಷಿಣ ಆಫ್ರಿಕೆಯ ಹಿಂದೀಯರು

ನಡುಗಾಲ ಸರಕಾರದ ಪ್ರತಿನಿಧಿಯೆಂದು ಈ ಪರಿಷತ್ತಿಗೆ ಹೋಗಿರುವ ವಿಜಯಲಕ್ಷ್ಮೀ

೬ನೇ ಪುಟಕ್ಕೆ







ಕರ್ಮವೀರ ೪ ನವ್ಹೆಂಬರ ೪೬

# ನೌಖಾಲಿ ತಿಪೇರಾ ಜಿಲ್ಹೆಗಳಲ್ಲಿ ಹತ್ಯಾಕಾಂಡ

(ಎರಡನೆ ಪುಟದಿಂದ)

ಲೇಂಗೆ ಪಾಕಿಸ್ತಾನ ಎಂಬ ಮುದ್ರೆಗಳಿರುತ್ತವೆ. ಹೀಗೆ ಮತಾಂತರ ಹೊಂದಿದವರು ಶುಕ್ರವಾರ ಮಸೀದೆಗೆ ಹೋಗಿ ನಮಾಜ ಮಾಡಬೇಕಾಗುತ್ತಿತ್ತು. ಸ್ತ್ರೀಯರು ಮತಾಂತರ ಹೊಂದಿದ ಬಳಿಕ ಅವರ ಬಳೆಗಳನ್ನೊಡೆದು ಕುಂಕುಮವನ್ನು ಅಳಿಸುತ್ತಿದ್ದರು. ಹೀಗೆ ಧರಿಸಿದ ಬಟ್ಟೆಗಳನ್ನು ನಾಶಗೊಳಿಸಿ ಎಲ್ಲ ಹಿಂದೂ ದೇವಾಲಯಗಳನ್ನು ನೆಲಸಮ ಮಾಡುತ್ತಿದ್ದರು.

೮) ಒತ್ತಾಯದಿಂದ ಮದುವೆ ಮಾಡಿದ ಅನೇಕ ಉದಾಹರಣೆಗಳಿವೆ. ಇವುಗಳ ಸಂಖ್ಯೆ ಮಾತ್ರ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ.

೯) ಸ್ತ್ರೀಯರ ಮೇಲಿನ ಅತ್ಯಾಚಾರದ ವಿವರಗಳನ್ನು ಸಂಗ್ರಹಿಸುವದು ನನ್ನಿಂದಾಗಲಿಲ್ಲ.

೧೦) ಇಲ್ಲಿನ ಹಿಂದುಗಳಿಗೆ ಮತಾಂತರ ಹೊಂದಿರಲಿ ಹೊಂದಿರದಿರಲಿ ಅವರಿಗಿನ್ನೂ ಗಂಡಾಂತರ ತಪ್ಪಿಲ್ಲ.

೧೧ ಗಲಭೆ ಪ್ರದೇಶಗಳಿಗೆ ಹೋಗುವ ಮಾರ್ಗಗಳನ್ನು ಗುಂಡರೇ ಕಾಯುತ್ತಿದ್ದಾರೆ. ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ಹೋಗಲು ಧರ್ಮಾಂತರ ಹೊಂದಿದ ಈ ಜನರಿಗೆ ಅಪ್ಪಣೆ ಚೀಟಿಗಳನ್ನು ಕೊಡುತ್ತಿದ್ದಾರೆ.

೧೨ ಗಲಭೆ ನಡೆಯುವಾಗ ಆ ಪ್ರದೇಶದ ದೊರಗುಳಿದವರಿಗೆ ಇನ್ನೂ ದುರಳಿ ಹೋಗುವದಾಗಿಲ್ಲ.

೧೩ ಅನೇಕ ಕುಟುಂಬಗಳಲ್ಲಿ ಪುರುಷರು, ಸ್ತ್ರೀಯರು, ಮಕ್ಕಳು ಇನ್ನೂ ಕಾಣದಂತಾಗಿದ್ದಾರೆ. ಗ್ರಾಮದ ಅಂಚೆ ಕಚೇರಿಗಳು ಮುಚ್ಚಲ್ಪಟ್ಟಿವೆ. ಹೊರಗಿನಿಂದ ಪತ್ರಗಳು ಬರುವದಿಲ್ಲ, ಒಳಗಿನವರಿಗೆ ಪತ್ರ ಬರೆಯಲು ಅನುಕೂಲತೆಗಳಿಲ್ಲ.

೧೪) ಗಲಭೆ ನಡೆಯುವಾಗ ಪೋಲೀಸರು ಮೂಲೆಗೆ ಕುಳಿತಿದ್ದರು. ಈಗ ಅವರು ಗಸ್ತಿ ತಿರುಗುತ್ತಿದ್ದರೂ ಆತ್ಮರಕ್ಷಣೆಯ ಹೊರತು ಬೇರೆ ಪ್ರಸಂಗಗಳಲ್ಲಿ ಗುಂಡು ಹಾರಿಸಬಾರದೆಂದು ಅವರಿಗೆ ಕಟ್ಟಪ್ಪಣೆ ಇದೆಯಂತೆ. ಅತ್ಯಾಚಾರಗಳನ್ನು ತಡೆಯುವ ಗೋಜಿಗೇ ಅವರು ಹೋಗುತ್ತಿರುವದಿಲ್ಲವಾದ್ದರಿಂದ ಆತ್ಮರಕ್ಷಣೆಯ ಪ್ರಸಂಗಗಳೇ ಅವರಿಗೆ ಬರುವದಿಲ್ಲ. ೨೦ ನೇ ತಾರೀಕಿನ ವರೆಗೆ ಮನೆಗಳ ಹೋಳಿ ಅವ್ಯಾಹತವಾಗಿದ ಬಗ್ಗೆ ನನ್ನಲ್ಲಿ ಆಧಾರಗಳಿವೆ. ಚಾಂದಪುರ, ನೌಖಾಲಿಗಳಲ್ಲಿ ೧೯-೨೦ ನೇ ತಾರೀಕು ಮನೆಗಳು ಉರಿಯುತ್ತಿದ್ದುದನ್ನು ನಾನು ಸ್ವತಃ ನೋಡಿರುವೆನು. ಮುಖ್ಯ ಮಂತ್ರಿ ಸುರವರ್ದಿಯವರ ಕಣ್ಣುಗಳಿಗೂ ಈ ದೃಶ್ಯಗಳು ಬಿದ್ದಿವೆ. ಅಲ್ಲಿನ ಜನರು ಎಲ್ಲವನ್ನೂ ಕಳೆದುಕೊಂಡು ಹೊಟ್ಟೆ ಬಟ್ಟೆಗಿಲ್ಲದವರಾಗಿರುವರು. ೨೫ ನೇ ತಾರೀಕಿನ ವರೆಗೆ ನೌಖಾಲಿಯಲ್ಲಿ ಕೇವಲ ೫೦ ಜನರನ್ನು ಮಾತ್ರ ಬಂಧಿಸಲಾಗಿದೆಂದು ಅಧಿಕಾರಿಗಳಿಂದ ಕೇಳಿದ್ದೇನೆ. ಪೋಲೀಸ, ಸೈನ್ಯಪಡೆ ಸಾಕಷ್ಟಿಲ್ಲ. ಹಳ್ಳಿಗಳನ್ನು ತೆರವು ಮಾಡಲಿಚ್ಛಿಸುವ ಹಿಂದುಗಳನ್ನು ಸ್ಥಳಾಂತರಿಸುವದು, ಅವರ ರಕ್ಷಣೆಗೆ ಯೋಗ್ಯ ವ್ಯವಸ್ಥೆ ಮಾಡುವದು ಅವಶ್ಯವಾಗಿದೆ. ಈ ಗಲಭೆಗಳಿಗೆ ಆರ್ಥಿಕ ಪರಿಸ್ಥಿತಿ ಕಾರಣವಲ್ಲ. ಒಬ್ಬ ಮುಸಲ್ಮಾನ ಶ್ರೀಮಂತನ ಮನೆಯೂ ಲೂಟಿ ಮಾಡಲ್ಪಟ್ಟಿಲ್ಲ. ಈ ಗಲಭೆಗಳ ಸ್ವರೂಪ ಜಾತೀಯದ್ದಿದೆ. ಈ ಎರಡು ಜಿಲ್ಹೆಗಳಲ್ಲಿ ನಿರಾಶ್ರಿತರ ಸಂಖ್ಯೆ ೪೦-೫೦ ಸಾವಿರ ಇರಬಹುದು.

ಇಷ್ಟೆಲ್ಲ ನಡೆದಿದ್ದರೂ ಬಂಗಾಲದ ಹಿಂದುಗಳು ಶಾಂತಚಿತ್ತದಿಂದಿರಬೇಕೆಂದೂ ಪ್ರತಿಕಾರದ ಗೊಡವೆಗೆ ಹೋಗಬಾರದೆಂದೂ ಬಿನ್ನವಿಸುತ್ತೇನೆ. ಪರಿಹಾರದ ವ್ಯವಸ್ಥೆಯನ್ನು ಮಾಡಬೇಕಾಗಿದೆ.

## ಮುಸ್ಲಿಂ ಲೀಗಿನವರ ಪ್ರಕಟನೆ

ಬಂಗಾಲ ಮುಸ್ಲಿಂ ಲೀಗ ಕಾರ್ಯಕಾರಿ ಸಮಿತಿಯವರು ಈ ಸಂಬಂಧದಲ್ಲಿ ದೀರ್ಘ ಪ್ರಕಟನೆ ಹೊರಡಿಸಿರುವರು.

ಮುಸ್ಲಿಂ ಲೀಗಿನವರು ಈ ಸಂಬಂಧದಲ್ಲಿ ಒಂದು ವಿಚಾರಣಾ ಮಂಡಲವನ್ನು ನಿಯಮಿಸಿದ್ದು ಅವರ ವರದಿಯನ್ವಯ ಇದು ಕೇವಲ ಗುಂಡರ ಹಾವಳಿ ಒಂದು ಜಾತಿಯ ವಿರುದ್ಧ ಇನ್ನೊಂದು ಜಾತಿಯವರು ನಡೆಸಿದ ದಾಳಿಯಲ್ಲೆಂದು ನಡೆದ ಘಟನೆಗಳಿಂದ ಗೊತ್ತಾಗುವದು. ಅಲ್ಲಿ ನಡೆದ ಘಟನೆಗಳು ನಿಜವಾಗಿಯೂ ನಿಷೇಧಾರ್ಹವಾಗಿವೆ. ಆದರೆ ಹಿಂದೂ ವೃತ್ತಪತ್ರಗಳಲ್ಲಿ ಪ್ರಕಟವಾದಷ್ಟು ಭಯಂಕರ ಘಟನೆ ಅಲ್ಲಿ ಆಗಿಲ್ಲ. ಸ್ತ್ರೀಯರ ಮಾನಭಂಗ, ಅಪಹಾರ ಒಂದೂ ಆಗಿಲ್ಲ. ಮನೆಗೆ ಕೊಳ್ಳಿಯಿಕ್ಕುವದು ಲೂಟಿ ಮಾಡುವದು ಸರ್ವಸಾಮಾನ್ಯವಾಗಿ ನಡೆದವು ಎಂಬುದೂ ಸುಳ್ಳು. ಅಲ್ಲೊಂದು ಇಲ್ಲೊಂದು ಧರ್ಮಾಂತರ ಮತ್ತು ಅಂತರಜಾತೀಯ ವಿವಾಹಗಳಾಗಿವೆ. ನೌಖಾಲಿ ಜಿಲ್ಹೆಯಲ್ಲಿ ೧೦೦ ಜನರು ತಿಪ್ಪೇರಾ ಜಿಲ್ಹೆಯಲ್ಲಿ ೧೫ ಜನರು ಮರಣ ಹೊಂದಿರಬಹುದು. ಒಬ್ಬ ಹರಿಜನನ ಮೇಲೆಯೂ ದಾಳಿಯಾಗಿಲ್ಲ. ಸ್ತ್ರೀ ಮತ್ತು ಚಿಕ್ಕ ಬಾಲಕರ ಕೊಲೆಯೊಂದೂ ಆಗಿಲ್ಲ. ಗುಂಡರ ಮೇಲೆ ಬಂದೂಕು ಕತ್ತಿಗಳಿಂದ ಏರಿ ಬಂದವರನ್ನಷ್ಟೇ ಕೊಲೆ ಮಾಡಿದ್ದಾರೆ. ಪರಿಹಾರ ಕೇಂದ್ರಗಳಲ್ಲಿಯ ಒಬ್ಬನ ಮೇಲೂ ಗಾಯಗಳಿಲ್ಲ. ಹೆಚ್ಚು ಜನರು ಭಯಭೀತರಾಗಿಯೆ ಓಡಿ ಬಂದಿರುವರು. ಈ ಎರಡೂ ಜಿಲ್ಹೆಗಳಲ್ಲಿ ಒಟ್ಟು ಸುಡಲ್ಪಟ್ಟವರ ಸಂಖ್ಯೆ ೨೦೦ ರ ಮೇಲಿಲ್ಲ. ಜನ ಮನೆ ಬಿಟ್ಟು ಹೋದ ಬಳಿಕ ಲೂಟಗಳಾಗಿವೆ. ಮನೆಗಳನ್ನು ಸುಟ್ಟು ಆಸ್ತಿಪಾಸ್ತಿಗಳಿಗೆ ಬೆಂಕಿ ಹಚ್ಚಿದ್ದೂ ವಿಮಾನದಿಂದ ತಿರುಗಾಡಿದ ನಮ್ಮ ಸಮಿತಿಯವರಿಗೆ ಕಂಡು ಬರಲಿಲ್ಲ.

ಹೀಗೆ ಜನ ಭಯಭೀತರಾಗಿ ಸಂರಕ್ಷಣೆಗಾಗಿ ತಾವಾಗಿಯೆ ಮುಸಲ್ಮಾನ ಧರ್ಮ ಸ್ವೀಕರಿಸಿದ್ದಾರೆ. ಪ್ರೇಮದಿಂದ ಅಂತರ್ಜಾತೀಯ ವಿವಾಹಗಳು ಎಷ್ಟೋ ಸಂದರ್ಭಗಳಲ್ಲಿ ಆಗಿವೆ. ಹಿಂದೂ ಪತ್ರಿಕೆಗಳು ಸುಳ್ಳಿನ ಸಂತೆಯನ್ನು ಪ್ರಸಿದ್ಧಿಸಿವೆ.

ನಮ್ಮ ಅಧೀನ ಸಂಸ್ಥೆಯ ಎಲ್ಲ ಮುಸಲ್ಮಾನ ಬಾಂಧವರು ಶಾಂತಿಯನ್ನು ಸ್ಥಾಪಿಸಬೇಕೆಂದು ವಿಧಿಸಿದ್ದೇವೆ. ಯಾರಾದರೂ ಮಾತಿನಿಂದ ಇಲ್ಲವೆ ಕೃತಿಗಳಿಂದ ಶಾಂತಿಸ್ಥಾಪನೆಗೆ ಭಂಗ ತಂದರೆ ಅವರ ಮೇಲೆ ಶಿಸ್ತು ಕ್ರಮ ತೆಗೆದುಕೊಳ್ಳಲಾಗುವದು. ಹಿಂದೂ ವೃತ್ತಪತ್ರಿಕೆಗಳಲ್ಲಿಯ ಈ ಅಪಪ್ರಚಾರವನ್ನು ತಡೆಯಬೇಕು ಎಂದು ಮುಂತಾಗಿ ಬರೆದಿದ್ದಾರೆ.

## ಪುಂಡಾಟಿಕೆಯ ಖಂಡನೆ

ಬರದ್ವಾನದ ಮುಸಲ್ಮಾನರ ಮುಖಂಡರೂ ಜಿಲ್ಹಾ ಮುಸ್ಲಿಂಲೀಗ ಕಾರ್ಯದರ್ಶಿಗಳೂ ಕೂಡಿ ಒಂದು ಪ್ರಕಟನೆ ಹೊರಡಿಸಿ ಈ ಪುಂಡಾಟಿಕೆಯನ್ನು ಖಂಡಿಸಿದ್ದಾರೆ. ಈ ಪುಂಡಾಟಿಕೆ ನಡೆಸಿದವರನ್ನು ಮುಸಲ್ಮಾನರೆಂದೇ ನಾವು ಕರೆಯುವದಿಲ್ಲ. ಅವರ ಕರಾಳ ಕೃತಿಯಿಂದ ಪವಿತ್ರ ಮುಸಲ್ಮಾನ ಧರ್ಮಕ್ಕೆ ಕಪ್ಪು ಬಳಿದಂತಾಗಿದೆ. ಈಗ ಸರಕಾರದವರು ಮತ್ತು ಇತರರು ನಡೆಸಿದ ಚಟುವಟಿಕೆಗಳನ್ನು ಅವರು ಕೂಡಲೆ ಕೈಕೊಳ್ಳಲಿಲ್ಲ. ಇನ್ನು ಮೇಲಾದರೂ ಎಲ್ಲ ಪಕ್ಷಗಳ ಶಿಷ್ಟ ಮಂಡಲದವರು ಈ ಭಾಗಗಳಲ್ಲಿ ಸಂಚರಿಸಿ ಜನರಲ್ಲಿ ವಿಶ್ವಾಸ ಹುಟ್ಟುವಂತೆ ಮಾಡಬೇಕು.

## ಮುಖಂಡರ ಬಿನ್ನಹ

ಮೌಲಾನಾ ಅಬುಲ್ ಕಲಂ ಆಝಾದರು ಈ ಸಂಬಂಧದಲ್ಲಿ ಒಂದು ಪ್ರಕಟನೆ ಹೊರಡಿಸಿ ಪ್ರತಿಯೊಬ್ಬ ಮುಸಲ್ಮಾನ ಹಿಂದುಗಳ ರಕ್ಷಣೆಗಾಗಿ ಪ್ರಯತ್ನಿಸಬೇಕೆಂದು ಬಿನ್ನವಿಸಿಕೊಂಡಿದ್ದಾರೆ.

ಜಮೇತ ಉಲ್ ಉಲೇಮಾದ ಕಾರ್ಯದರ್ಶಿ ಮೌಲಾನಾ ಹಫೀಜ ರಹಮಾನರು ಈ ಘಟನೆಗಳಿಂದ ಇಸ್ಲಾಂ ಧರ್ಮಕ್ಕೆ ಕಪ್ಪು ಬಡಿದಿದೆ, ನೆರೆಯಲ್ಲಿರುವ ಅಲ್ಪಸಂಖ್ಯಾಕರ ಪ್ರಾಣಮಾನ ಸಂಪತ್ತುಗಳ ರಕ್ಷಣೆಗಾಗಿ ತಮ್ಮ ಪ್ರಾಣಕೊಡಲಿಕ್ಕೂ ಸಿದ್ಧರೆಂಬುದಾಗಿ ಕೃತಿಯಿಂದ ಸಿದ್ಧ ಮಾಡಿ ತೋರಿಸಬೇಕೆಂದು ಮುಂತಾಗಿ ಬಿನ್ನವಿಸಿದ್ದಾರೆ.




ಮಹಾತ್ಮಾ ಗಾಂಧಿಯವರು ಪ್ರಕಟನೆ ಹೊರಡಿಸಿ ಜನರು ಶಾಂತಚಿತ್ತದಿಂದ ಇರಬೇಕು. ಕೊಲ್ಲುವದನ್ನು ಕಲಿಯದೆ ಸಾಯುವದನ್ನು ಕಲಿಯಬೇಕೆಂದು ಕೇಳಿಕೊಂಡಿರುವರು. ಪೂರ್ವ ಬಂಗಾಲದ ಗಲಭೆಗಳು ನಿಲ್ಲಬೇಕಾದರೆ ತಮ್ಮ ಪ್ರಾಣಗಳನ್ನರ್ಪಿಸುವದು ಕೂಡ ಅವಶ್ಯವೆಂದು ಬಂಗಾಲ ಸರಕಾರದ ಮಂತ್ರಿಗಳಿಗೆ ಮನದಟ್ಟಾದರೆ ಹಾಗೆ ಕೂಡ ಮಾಡಲು ಅವರು ಹಿಂಜರಿಯುವದಿಲ್ಲೆಂದು ಮುಂತಾಗಿ ಒತ್ತಾಯದಿಂದ ಮತಾಂತರ ಗೊಳಿಸಲ್ಪಟ್ಟವರಿಗೆ ಪ್ರಾಯಶ್ಚಿತ್ತ ಕೂಡ ಅವಶ್ಯವಿಲ್ಲೆಂದು ಮುಂತಾಗಿ ಅಭಿಪ್ರಾಯಪಟ್ಟಿದ್ದಾರೆ. ಬ್ಯಾ. ಜಿನ್ನಾರವರು ಪ್ರಕಟನೆಯೊಂದನ್ನು ಹೊರಡಿಸಿ ಈ ಗಲಭೆಗಳನ್ನು ಖಂಡಿಸಿದ್ದಾರೆ.

ಮುಖ್ಯಮಂತ್ರಿಗಳು ಒಂದು ಪ್ರಕಟನೆ ಹೊರಡಿಸಿ ಈ ಗಲಭೆಗಳನ್ನು ನಿಲ್ಲಿಸಲು ಹಿಂದುಮುಸಲ್ಮಾನರನ್ನೆಲ್ಲ ಬಿನ್ನವಿಸಿಕೊಂಡಿದ್ದಾರೆ. ಇನ್ನು ಹಲವು ಮುಖಂಡರು ಪ್ರಕಟನೆಗಳನ್ನು ಹೊರಡಿಸಿ ಈ ಪುಂಡಾಟಿಕೆಗಳನ್ನು ಖಂಡಿಸಿದ್ದಾರೆ.

## ಅಂತರ್‌ರಾಷ್ಟ್ರೀಯ

(೫ನೇ ಪುಟದಿಂದ))

ಪಂಡಿತರು ಅಲ್ಲಿ ಮಾತಾಡುತ್ತ ಬ್ರಿಟಿಶ್ ಸರಕಾರದ ಸಾಮ್ರಾಜ್ಯತ್ವದ ಧೋರಣವನ್ನು ಟೀಕಿಸಿದರು. ಈ ವರೆಗೆ ಹಿಂದುಸ್ತಾನ ಯುಕ್ತರಾಷ್ಟ್ರ ಸಂಘದ ಸಭೆಗಳಲ್ಲಿ ಪ್ರಮುಖ ಪಾತ್ರ ವಹಿಸಿರದಿದ್ದರೂ ಪ್ರಬಲ ರಾಷ್ಟ್ರಗಳ ದಾಳಿಯನ್ನು ವಿರೋಧಿಸಲು ಹಿಂದುಸ್ತಾನ ಪಟ್ಟ ಪರಿಶ್ರಮ ಹಾಗು ಜಾಗತಿಕ ಆರ್ಥಿಕ ಪರಿಸ್ಥಿತಿಯಲ್ಲಿ ಹಿಂದುಸ್ತಾನಕ್ಕಿರುವ ಸ್ಥಾನಮಾನ ಮುಂತಾದ್ದನ್ನು ನೋಡಿದರೆ ಅದು ಇನ್ನೂ ಹೆಚ್ಚು ಪ್ರಮುಖ ಪಾತ್ರ ವಹಿಸುವದವಶ್ಯವಾಗಿದೆಂದು ಅವರು ಹೇಳಿದರು. ಹಿಂದುಸ್ತಾನ ಎರಡನೆಯವರ ಮೇಲೆ ಪ್ರಭುತ್ವ ನಡೆಸಲು ಬಯಸುವದಿಲ್ಲ. ಎರಡನೆ ಜನಾಂಗದ ಮೇಲೆ ವಿಶೇಷ ಅಧಿಕಾರ ನಡೆಸಬೇಕೆಂದೂ ನಾವು ಬಯಸುವದಿಲ್ಲ. ನಮ್ಮ ಜನ ಹೋದಲ್ಲೆಲ್ಲ ಸನ್ಮಾನ ಮತ್ತು ಮರ್ಯಾದೆಯ ಸ್ಥಾನ ಸಿಕ್ಕುವಂತೆ ನೋಡಿಕೊಳ್ಳುವದು ಹಿಂದುಸ್ತಾನದ ಗುರಿಯಾಗಿದೆ. ವಿಜಯಲಕ್ಷ್ಮಿಯವರ ಈ ಭಾಷಣದ ಪರಿಣಾಮ ಬೇರೆ ಬೇರೆ ರಾಷ್ಟ್ರ ಪ್ರತಿನಿಧಿಗಳ ಮೇಲೆ ಚನ್ನಾಯಿತು. ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರನ್ನು ನಡೆಸಿಕೊಳ್ಳುವ ಬಗೆಯ ಸಂಬಂಧದಲ್ಲಿ ಅವರು ಮಾಡಿದ ಟೀಕೆಯ ಪರಿಣಾಮವೂ ಪ್ರತಿನಿಧಿಗಳ ಮೇಲೆ ಚೆನ್ನಾಗಿ ಆಯಿತು. ಇಂಡೋನೇಶಿಯದಲ್ಲಿ ಹಿಂದೀ ಸೈನಿಕರನ್ನು ಪಯೋಗಿಸಿದ್ದರ ಸಂಬಂಧದಲ್ಲಿ ಹಿಂದುಸ್ತಾನದ ಜನತೆಯಲ್ಲಿ ಯಾವ ಬಗೆಯ ತ್ವೇಷಭಾವನೆಯುಂಟಾಗಿದೆಂಬದನ್ನು ವಿವರಿಸುತ್ತ ಇದೆಲ್ಲ ರಾಷ್ಟ್ರಸಂಘಕ್ಕೆ ಮನವರಿಕೆಯಾಗಿರಲಿಕ್ಕೆಬೇಕೆಂದು ಹೇಳಿದರು. ಜಾಗತಿಕ ಸ್ವಾತಂತ್ರ್ಯಕ್ಕಾಗಿ ಹೂಡಲ್ಪಟ್ಟ ಯುದ್ಧದಲ್ಲಿ ವಿಜಯ ಸಿಕ್ಕದ್ದರಿಂದ ಸಾಮ್ರಾಜ್ಯಗಳಿಗಾಗಿ ಅಲ್ಲಲ್ಲಿ ನಡೆದಿರುವ ಚಿಕ್ಕಪುಟ್ಟ ಯುದ್ಧಗಳೂ ನಿಲ್ಲಬೇಕೆಂದು ಅವರು ಹೇಳಿದರು. ಈ ಬಗೆಯ ಧೋರಣೆ ಯುಕ್ತರಾಷ್ಟ್ರಸಂಘದ ಸದಸ್ಯರು ವಹಿಸಿದಾಗಲೆ ಜಾಗತಿಕ ಶಾಂತಿ.







## ಜಾಣತನದ ಉಪಾಯ

ಮುಂಬಯಿ ಶಾಸನ ಸಭೆ ಇದೇ ತಾನೆ ಸ್ವೀಕರಿಸಿದ ಮುಂಬಯಿ ಹರಿಜನ ಕಾಯದೆ (ಸಾಮಾಜಿಕ ಅಪಾತ್ರತೆ ನಿವಾರಕ) ಯ ಪ್ರತಿಯನ್ನು ಶ್ರೀ ಜಿ. ಡಿ. ತಪಾಸೆ ಎಂ. ಎಲ್. ಎ. (ಮುಂಬಯಿ) ಇವರು ನನ್ನ ಕಡೆಗೆ ಕಳಿಸಿದ್ದಾರೆ. ಅದರಲ್ಲಿ ಅತಿ ಉಚಿತವಾದ ಕಲಮುಗಳನ್ನು ಕೆಳಗೆ ಕೊಟ್ಟಿದ್ದೇನೆ.

೩) ಯಾವದೆ ಕಾಯದೆಯಲ್ಲಿ ರೂಢಿ ಸಂಪ್ರದಾಯಗಳು ಎಷ್ಟೇ ವಿರುದ್ಧವಿದ್ದರೂ ಹರಿಜನನೆಂದ ಮಾತ್ರಕ್ಕೆ ಅವನು ಅಪಾತ್ರನಾಗನು.

ಅ) ಕಾಯದೆಬದ್ಧವಾದ ಸರಕಾರದ ಕಚೇರಿಯಲ್ಲಿ ನವಕರಿಗೆ ಅಪಾತ್ರನಾಗನು.

ಬ ೧) ಬೇರೆ ಜಾತಿಯವರಿಗೆ ಮತ್ತು ಹಿಂದುಗಳಿಗೆ ಹೋಗಲು ಅವಕಾಶವಿದ್ದ ನದಿ, ಹಳ್ಳ, ಝರಿ, ಭಾವಿ, ಕೆರೆ, ಹೊಂಡ, ನಳ ಇಲ್ಲವೆ ಉಳಿದ ಯಾವದೆ ಬಗೆಯ ಜಲಾಶಯ, ಸ್ನಾನಗೃಹ, ಸ್ಮಶಾನ, ಯಾವದೇ ಬಗೆಯ ಆರೋಗ್ಯ ಸೌಕರ್ಯ, ಮಾರ್ಗ, ಇವುಗಳ ಉಪಯೋಗಕ್ಕೆ ಹರಿಜನರಿಗೆ ಪ್ರತಿಬಂಧವಿರಕೂಡದು.

೨) ಪ್ರಾಂತಿಕ ಸರಕಾರ ಅಥವಾ ಸ್ಥಾನಿಕ ಸಂಸ್ಥೆಗಳಿಂದ ಅಪ್ಪಣೆ ಪಡೆದ ಯಾವವೆ ಸಾರ್ವಜನಿಕ ವಾಹನಗಳನ್ನು ಬಾಡಿಗೆ ಹಿಡಿಯಲು ಅವರಿಗೆ ಯಾವದೇ ಬಗೆಯ ಪ್ರತಿಬಂಧವಿರಕೂಡದು.

೩) ಪ್ರಾಂತದ ಹಣದಿಂದ ಇಲ್ಲವೆ ಸ್ಥಾನಿಕ ಸಂಸ್ಥೆಗಳ ನಿಧಿಯಿಂದ ಪೂರ್ಣವಾಗಿ ಇಲ್ಲವೆ ಅರ್ಧಮರ್ಧ ಕಟ್ಟಲ್ಪಟ್ಟ ಕಟ್ಟಡ, ಬಾವಿ, ಹೊಂಡ ಇಲ್ಲವೆ ಸಾರ್ವಜನಿಕ ಸ್ಥಳಗಳಿಗೆ ಪ್ರತಿಬಂಧವಿರಕೂಡದು.

೪) ಸಾರ್ವಜನಿಕ ಮನರಂಜನೆಯ ಸ್ಥಳಕ್ಕೆ ಇಲ್ಲವೆ ನಾಟ್ಯಗೃಹಗಳಿಗೆ ಹೋಗಲು ಪ್ರತಿಬಂಧವಿರಕೂಡದು.

೫) ಹಿಂದುಗಳು ಮತ್ತು ಇತರರು ಯಾವ ಅಂಗಡಿಗಳಿಗೆ ಹೋಗಬಲ್ಲರೋ ಅಂಥ ಅಂಗಡಿಗಳಿಗೆ ಹೋಗಲು ಪ್ರತಿಬಂಧವಿರಕೂಡದು.

೬) ಇಂಥದೊಂದು ವಿಶಿಷ್ಟ ವರ್ಗಕ್ಕೆ ಇಲ್ಲವೆ ಜಾತಿಯ ಉಪಯೋಗಕ್ಕಲ್ಲೆಂದು ವಿಧಿಸಿ ಸಾಮಾನ್ಯವಾಗಿ ಹಿಂದುಗಳಿಗೆಲ್ಲ ಪ್ರವೇಶವಿರುವ ಸ್ಥಳಗಳಿಗೆ ಹೋಗಲು ಪ್ರತಿಬಂಧವಿರಕೂಡದು.

೭) ಸಾಮಾನ್ಯವಾಗಿ ಹಿಂದುಗಳ ಕಲ್ಯಾಣಕ್ಕಾಗಿಯೆಂದು ಇರುವ ಧರ್ಮಾರ್ಥ ಟ್ರಸ್ಟುಗಳ ಉಪಯೋಗ ಮಾಡಲು ಹರಿಜನರಿಗೆ ಯಾವದೇ ಪ್ರತಿಬಂಧವಿರತಕ್ಕದ್ದಲ್ಲ.

೩ ಅ) ಉಪಕಲಮು ೧, ೩, ೪, ೫ ಮತ್ತು ೬ ರಲ್ಲಿ ಹೇಳಿದ ಯಾವ ಸ್ಥಳಗಳ ನಿಯಂತ್ರಕರು ಮತ್ತು ಮೂರನೇ ಬ ಕಲಮಿನ ೨ ನೇ ಉಪಕಲಮಿನಲ್ಲಿ ಉಲ್ಲೇಖಿಸಿದ ಯಾವದೇ ವಾಹನದ ನಿಯಂತ್ರಕರು ಹರಿಜನರಿಗೆ ಯಾವದ್ದೇ ಬಗೆಯ ನಿರ್ಬಂಧ ಹೇರತಕ್ಕದ್ದಲ್ಲ. ಅಥವಾ ಅವನ ವಿರುದ್ಧ ಭೇದಭಾವವನ್ನು ಕಲ್ಪಿಸುವ ರೀತಿಯಲ್ಲಿ ವರ್ತಿಸಕೂಡದು.

೪) ಯಾವದೇ ನಿರ್ಣಯವನ್ನು ಕೈಕೊಳ್ಳುವಾಗ ಅಥವಾ ಹುಕುಮನ್ನು ವಿಧಿಸುವಾಗ ನ್ಯಾಯಾಧೀಶರು ಇವನು ಹರಿಜನನೆಂದು ರೂಢಿ ಸಂಪ್ರದಾಯಗಳಿಗೆ ಶರಣು ಹೋಗಿ ಅವನ ಮೇಲೆ ನಾಗರಿಕ ಅಪಾತ್ರತೆಯನ್ನು ಹೇರಕೂಡದು.

೫) ತನಗೆ ಒಪ್ಪಿಸಿದ ಕಾರ್ಯಕರ್ತವ್ಯಗಳನ್ನು ನೆರವೇರಿಸುವಾಗ ಯಾವದೇ ಸ್ಥಾನಿಕ ಸಂಸ್ಥೆ ೪ ನೇ ಕಲಮಿನಲ್ಲಿ ಹೇಳಿದ ರೂಢಿ ಸಂಪ್ರದಾಯಗಳನ್ನು ಗಮನಿಸಕೂಡದು.

೬ ಅ) ಉಪಕಲಮು ೧, ೩, ೪, ೫ ಮತ್ತು ೬ ರಲ್ಲಿ ಉಲ್ಲೇಖಿಸಿದ ಯಾವ ಸ್ಥಳಗಳ ಪ್ರವೇಶಕ್ಕೆ ಇಲ್ಲವೆ ಉಪಯೋಗಕ್ಕೆ ಹರಿಜನನೆಂದು ಯಾರು ಪ್ರತಿಬಂಧಿಸುವರೋ ೩ ನೇ ಕಲಮಿನ ಉಪಕಲಮು ೨ ರಲ್ಲಿ ಉಲ್ಲೇಖಿಸಿದ ವಾಹನಗಳ ಉಪಯೋಗಕ್ಕೆ ಯಾರು ಪ್ರತಿಬಂಧ ಮಾಡುವರೋ ಅಥವಾ ಅದೇ ಬಿ ಕಲ್ಮಿನ ೭ ನೇ ಉಪಕಲ್ಮಿನ ಧಾರ್ಮಿಕ ಟ್ರಸ್ಟದನ್ವಯ ದೊರಕುವ ಲಾಭಕ್ಕೆ ಯಾರು ಅಡ್ಡಿ ಮಾಡುವರೋ ಅಥವಾ ಅದಕ್ಕೆ ಉತ್ತೇಜನ ಕೊಡುವರೋ ಅವರಿಗೆ ಅಥವಾ

ಬ) ಯಾರು ಹರಿಜನರ ಮೇಲೆ ನಿರ್ಬಂಧಹೇರುವರೋ ಅಥವಾ ಅವರ ವಿರುದ್ಧ ಭೇದಭಾವ ಕಲ್ಪಿಸುವರೊ ಇಲ್ಲವೆ ಇಂಥ ನಿರ್ಬಂಧಗಳನ್ನು ಹೇರಲು ಭೇದಭಾವ ಕಲ್ಪಿಸಬೇಕೆಂದು ಎರಡನೆಯವರನ್ನು ಪ್ರೇರಿಸುವರೊ? ಅವರಿಗೆ ೩ ತಿಂಗಳವರೆಗೆ ಶಿಕ್ಷೆ ಇಲ್ಲವೆ ೨೦೦ ರೂಪಾಯಿಗಳವರೆಗೆ ದಂಡ ಅಥವಾ ಶಿಕ್ಷೆ ಮತ್ತು ದಂಡ ಎರಡೂ ವಿಧಿಸಲಾಗುವದು.

೭) ಈ ಕಾಯಿದೆಯನ್ವಯ ಶಿಕ್ಷೆಗೆ ಪಾತ್ರವಾಗುವ ಅಪರಾಧ ಮಾಡಿದ ಯಾವನೇ ಮನುಷ್ಯನು ಪುತ್ತೆ ಅದೇ ಅಪರಾಧ ಮಾಡಿದರೆ ಅವನಿಗೆ ೬ ತಿಂಗಳವರೆಗೆ ಶಿಕ್ಷೆ ಇಲ್ಲವೆ ೫೦೦ ರೂಪಾಯಿಗಳವರೆಗೆ ದಂಡ ಅಥವಾ ಶಿಕ್ಷೆ ಮತ್ತು ದಂಡ ಎರಡೂ ವಿಧಿಸಲ್ಪಡುವವು. ಮತ್ತೂ ಇಂಥ ಅಪರಾಧ ಅವನು ಮಾಡಿದ್ದಾದರೆ ಮೂರನೇ ಅಥವಾ ಮುಂದಿನ ಅಪರಾಧಗಳಿಗಾಗಿ ಒಂದು ವರ್ಷದವರೆಗಿನ ಶಿಕ್ಷೆಗೆ ಮತ್ತು ೧೦೦೦ ರೂಪಾಯಿವರೆಗಿನ ದಂಡಕ್ಕೆ ಅವನು ಪಾತ್ರನಾಗುವನು"

ಈ ಮಸೂದೆಯನ್ನು ಮಂಡಿಸುವಾಗ ತಾವು ಮಾಡಿದ ಭಾಷಣದ ಪ್ರತಿಯನ್ನು ಈ ಮಸೂದೆಯ ಜನಕರು ನನಗೆ ಕಳಿಸಿ ಕೊಟ್ಟಿರುವರು. ಅದರಲ್ಲಿ ಅತ್ಯುಚಿತವಾದ ವಾಕ್ಯಗಳನ್ನು ಕೆಳಗೆ ಉಲ್ಲೇಖಿಸುವೆನು.

"ಈ ಅಸ್ಪೃಶ್ಯತೆಯೆಂದರೆ ಅವಿವೇಕತನವೇ ಸರಿ. ಹರಿಜನನು ಜನ್ಮವೆತ್ತಿದ ಕೂಡಲೆ ಅವನಿಗೆ ಅಸ್ಪೃಶ್ಯತೆ ತಗಲುತ್ತದೆ.......ಹರಿಜನನಾಗಿ ಅವನು ಹುಟ್ಟುವನು. ತನ್ನ ಜೀವಮಾನದಲ್ಲೆಲ್ಲ. ಅವನು ಹರಿಜನನಾಗಿಯೆ ಉಳಿಯುವನು ಮತ್ತು ಹರಿಜನನೆಂದೆ ಸಾಯುವನು. ಹಿಂದುಗಳೆಂದೆನಿಸಿಕೊಳ್ಳುವವರಿಗಿಂತ ಅವನೆಷ್ಟೇ ಶುಚಿರ್ಭೂತನಾಗಿದ್ದರೂ ಅವನೆಷ್ಟೇ ಜಾಣನಿದ್ದರೂ ಶ್ರೇಷ್ಠ ಮನುಷ್ಯನಾಗಲಾರನು. ಮರಣ ಹೊಂದಿದ ಬಳಿಕವೂ ಅವನ ಬೂದಿ ಮತ್ತು ಮಣ್ಣು ಉಳಿದವರ ಬೂದಿ ಮತ್ತು ಮಣ್ಣಿನಲ್ಲಿ ಮಿಶ್ರವಾಗಬಾರದೆಂಬುದು ಅತ್ಯಂತ ನಿಂದ್ಯವಾದ ಸಂಗತಿಯಾಗಿದೆ...... ಸವರ್ಣ ಹಿಂದುಗಳಷ್ಟೇ ಅವರನ್ನು ಅಸ್ಪೃಶ್ಯರೆಂದು ಭಾವಿಸುವದಿಲ್ಲ, ಕ್ರಿಶ್ಚಿಯನ್‌ರು ಮುಸಲ್ಮಾನರು ಮತ್ತು ಇತರರು ಕೂಡ ಅವರನ್ನು ಅಸ್ಪೃಶ್ಯರೆಂದು ನಡೆಸಿಕೊಳ್ಳುವದರಿಂದ ಅವರ ಸಂಕಷ್ಟಗಳು ಮತ್ತಷ್ಟು ಹೆಚ್ಚುತ್ತವೆ... ಕೆಲವೊಂದು ಸಾಮಾಜಿಕ, ನಾಗರಿಕ ಮೂಲಭೂತ ಹಕ್ಕುಗಳನ್ನು ಪಯೋಗಿಸಿಕೊಳ್ಳುವಲ್ಲಿ ಈ ಮಸೂದೆ ಹರಿಜನರಿಗೆ ಒಂದು ಬಗೆಯ ಸನದು, ತಾಮ್ರಪಟ ಆಗಿದೆಂದು ನನಗೆನಿಸುತ್ತದೆ"

ಹಿಂದುಗಳ ವಿಶೇಷ ವಿರೋಧವಿಲ್ಲದೆ ಈ ಮಸೂದೆ ಸ್ವೀಕೃತವಾದುದು ಮಹತ್ವದ ಸಂಗತಿಯಾಗಿದೆ. ಈ ಕಾಯಿದೆಯು ಯಶಸ್ವಿಯಾಗುವುದೆಂಬುದಕ್ಕೆ ಶುಭ ಸೂಚನೆಯಿದು. ಅದರೂ ಅದರ ಬಗ್ಗೆ ಹೆಚ್ಚು ಆಶಾಪೂರ್ಣರಾಗಿರಲಿಕ್ಕಾಗದು. ದುರ್ದೈವದಿಂದ ನಾವು ಚಪ್ಪಾಳೆಯಿಕ್ಕಿ ಗೊತ್ತುವಳಿಗಳನ್ನು ಪಾಸು ಮಾಡುವೆವು ಆದರೆ ಅವು ಕಾಗದದಲ್ಲಿಯೇ ಉಳಿಯುವಂತೆ ಮಾಡುವೆವೆಂಬುದು ನಮಗೆ ಗೊತ್ತಿದೆ. ಈ ಕಾಯಿದೆ ನಿಷ್ಠುರತೆಯಿಂದ ಕಾರ್ಯರೂಪದಲ್ಲಿ ಬರುವಂತೆ ಸರಕಾರದವರು ಮತ್ತು ಸುಧಾರಕರು ಅತ್ಯಂತ ದಕ್ಷರಾಗಿರಬೇಕಾದುದು ಅವಶ್ಯವಾಗಿದೆ.

ಈ ಮಸೂದೆಯನ್ನು ಮಂಡಿಸಿದವರು ತಮ್ಮ ಭಾಷಣದಲ್ಲಿ ಹೇಳಿದಂತೆ ಅವಿವೇಕತನ ಹಿಂದುಸ್ತಾನದಲ್ಲಿ ಇನ್ನು ಹೆಚ್ಚಾಗಿದೆಂಬುದನ್ನು ಬಚ್ಚಿಡುವಲ್ಲಿ ಅರ್ಥವಿಲ್ಲ. ಇದು ಕೇವಲ ಅಸ್ಪೃಶ್ಯತೆಗೆ ಮಾತ್ರ ಅನ್ವಯಿಸುತ್ತದೆಯೆಂದಲ್ಲ ಉಳಿದ ಅನೇಕ ಸಂಗತಿಗಳಿಗೂ ಅನ್ವಯಿಸುತ್ತದೆ. ಅದುದರಿಂದ ಸುಧಾರಕರು ಈ ರಕ್ಕಸನ ಕಡೆಗೆ ಹೆಚ್ಚು ಗಮನ ಕೊಟ್ಟು ಇದಕ್ಕೆ ಬಲಿಯಾದವರಗೂಡ ದಕ್ಷತೆಯಿಂದ ಜಾಣತನದಿಂದ ಮತ್ತು. ವಿನಮ್ರತೆಯಿಂದ ವ್ಯವಹರಿಸಬೇಕು.

ಮೋ. ಕ. ಗಾಂಧಿ

## ಇಸ್ಲಾಮು ವಿರೋಧಿ

ಅಖಿಲ ಭಾರತ ಮಜಲೀಸ ಎ. ಅಹರಾರ ಸಂಸ್ಥೆಯ ಹಿಂದಿನ ಅಧ್ಯಕ್ಷ ಶೇಖಸಾಹೇಬ ಹಸನುದ್ದೀನರು ಕೆಳಗಿನ ಪ್ರಕಟನೆಯನ್ನು ಹೊರಡಿಸಿರುವರು.

"ಪೂರ್ವ ಬಂಗಾಲದಿಂದ ಬರುತ್ತಿರುವ ಭೀಕರ ಮತ್ತು ಅಮಾನುಷ ಘಟನೆಗಳ ಸುದ್ದಿಗಳನ್ನು ಯಾವ ನಿಜ ಮುಸಲ್ಮಾನನೂ ಸ್ವಾಗತಿಸಲಾರನು; ಅಲ್ಲದೆ ಈ ಸುದ್ದಿಗಳು ಪ್ರಶಂಸನೀಯ ಮತ್ತು ಇಸ್ಲಾಮು ಧರ್ಮಕ್ಕೆ ಉಚಿತವಾದವುಗಳೂ ಆಗಲಾರವು. ಮೊದಲನೇ ಖಲೀಪನು ಮದೀನಾ ಪಟ್ಟಣವನ್ನು ಬಿಡುವ ಕಾಲಕ್ಕೆ ಚೀಫ ಕಮಾಂಡರರಿಗೆ ಕೊಟ್ಟ ಆದೇಶಗಳನ್ನು ಈ ಭಾಗದಲ್ಲಿರುವ ಬಹುಸಂಖ್ಯಾಕ ಮುಸಲ್ಮಾನರ ಕೃತ್ಯಗಳಿಗೆ ಹೋಲಿಸಿ ನೋಡಿರಿ. 'ನಾಗರಿಕರನ್ನು ರಕ್ಷಿಸಿರಿ, ಮುಸಲ್ಮಾನೇತರ ಸ್ತ್ರೀಯರ ಪಾತಿವ್ರತ್ಯವನ್ನು ಕಾಪಾಡಿರಿ ಮತ್ತು ಪೂಜೆಯ ಸ್ಥಳಗಳೆಲ್ಲ ಪವಿತ್ರ ಸ್ಥಳಗಳೆಂದುಭಾವಿಸಿರಿ' ಎಂದು ಈ ಆದೇಶಗಳಲ್ಲಿ ವಿಧಿಸಲಾಗಿದೆ. ತದ್ವಿರುದ್ಧವಾಗಿ ವಿಪರೀತ ಹತ್ಯಾಕಾಂಡ, ಕೊಳ್ಳಿ; ತರುಣ ಸ್ತ್ರೀಯರನ್ನು ಒತ್ತಾಯದಿಂದ ಧರ್ಮಾಂತರಗೊಳಿಸುವದು; ಅವರನ್ನು ಜನಾನಾದಲ್ಲಿ ಬಚ್ಚಿಡುವದು ಮೊದಲಾದವುಗಳು ಯಾವ ಸುಧಾರಿಸಿದ ಜನಾಂಗವೂ ಸಹಿಸಲಾರದಂಥ ನಾಚಿಕೆಗೇಡು ಕೃತ್ಯಗಳು. ಒಂದು ವಿಶಿಷ್ಟ ಧ್ಯೇಯಸಾಧನೆಗಾಗಿ ಕೆಲವೊಂದು ಜನರ ಭಾವನೆಗಳನ್ನುದ್ರೇಕಿಸಿ ಅವುಗಳ ನಿಯಂತ್ರಣದತ್ತ ಕಣ್ಣು ಮುಚ್ಚಿಕೊಂಡು ಕೂಡ್ರುವ ರಾಜಕೀಯ ಅಪ್ರಾಮಾಣಿಕತೆಯ ಮತ್ತು ಪ್ರಮಾದದ ಪರಿಣಾಮವಾಗಿ ಇಂಥ ದುಷ್ಕೃತ್ಯಗಳು ನಡೆಯುತ್ತಿರುವದನ್ನು ನೋಡಿ ನನಗೆ ಹೃದಯ ದ್ರಾವಕ ದುಃಖವಾಗಿದೆ. ಯಾವ ಸರಕಾರವೂ ಇಂಥ ಕೃತಿಗಳನ್ನು ಬಹಳ ದಿನಗಳ ವರೆಗೆ ಸಹಿಸಲಾರದೆಂಬುದು ನಿಶ್ಚಿತವಾಗಿದೆ.

"ಸೈನ್ಯ ಮತ್ತು ಪೋಲೀಸ ಪಡೆಗಳ ಬಲವನ್ನು ಪಯೋಗಿಸುವದು ಇದಕ್ಕುಪಾಯವೇ ಇಲ್ಲವೆ ಒಂದೇ ದೇಶದಲ್ಲಿರುವ ಜನತೆಯಲ್ಲಿ ಪರಸ್ಪರ ಮರ್ಯಾದೆ, ವಿಶ್ವಾಸ ಮತ್ತು ಸಹಕಾರಗಳೆ ಇದಕ್ಕೆ ಉಪಾಯವೆ ಎಂಬ ಪ್ರಶ್ನೆ ಈ ಸಂದರ್ಭದಲ್ಲಿ ಉದ್ಭೂತವಾಗುವದು. ಬಂಗಾಲದಲ್ಲಿ ಶಾಂತ ಮತ್ತು ಸಮಾಧಾನ ವಾತಾವರಣವುಂಟಾಗಬೇಕಾದರೆ ಸಾಮಾನ್ಯವಾಗಿ ಹಿಂದುಸ್ತಾನದ ಮುಸಲ್ಮಾನರು ವಿಶೇಷತಃ ಬಂಗಾಲದಲ್ಲಿಯ ಮುಸಲ್ಮಾನರು ಮುಂದೆ ಬರಲಿಕ್ಕೆ ಬೇಕು ಏಕೆಂದರೆ ಈ ಪ್ರಾಂತದಲ್ಲಿ ಮುಸಲ್ಮಾನರು ಬಹುಸಂಖ್ಯಾಕರಾಗಿದ್ದಾರೆ. ಅಲ್ಪಸಂಖ್ಯಾಕರನ್ನು ಸಂತುಷ್ಟವಿಟ್ಟು, ಅವರು ವಿವಂಚನೆ ಮತ್ತು ತಿಕ್ಕಾಟಗಳಿಲ್ಲದೆ ಜೀವನವನ್ನು ಸಾಗಿಸಿಕೊಂಡು ಹೋಗುವಂತೆ ನೋಡಿಕೊಳ್ಳುವದು ಮುಸ್ಲಿಮ ಬಹುಸಂಖ್ಯಾಕರ ಮೊದಲನೆ ಕರ್ತವ್ಯವಾಗಿದೆ.

"ದುರ್ದೈವದಿಂದ ಬಂಗಾಲದಲ್ಲಿಯ ಮುಸಲ್ಮಾನರ ಧುರೀಣತ್ವವು ಯಾವದೇ ಬಗೆಯ ನೀತಿ, ಸಭ್ಯತೆಯಿಲ್ಲದ ಕೆಲವೊಂದು ಗುಂಪಿನ ಕಡೆಗಿರುವದು. ಇಸ್ಲಾಮುವು ಬೋಧಿಸಿದ ಅತ್ಯುಚ್ಚ ತತ್ವಗಳ ಪ್ರಕಾಶದಲ್ಲಿ ಉಳಿದ ಮುಸಲ್ಮಾನರು ಮುಂದೆ ಬಂದು ಈ ಪ್ರದೇಶದಲ್ಲಿಯ ದಾರಿ ತಪ್ಪಿದ ಮತ್ತು ಭಾವನಾಪ್ರೇರಿತ ಬಂಧುಗಳ ಮನವೊಲಿಸುವಲ್ಲಿ ಎಲ್ಲ ಬಗೆಯ ಗಂಡಾಂತರಗಳನ್ನೆದುರಿಸಲು ಸಿದ್ಧರಾಗಬೇಕು. ಯೋಗ್ಯ ಮತ್ತು ಸಹಾನುಭೂತಿಪರ ನೆರೆಯವರಾಗುವಂತೆ ಅವರನ್ನು ಪ್ರೇರೇಪಿಸಬೇಕು. ಅನಿರ್ಬಂಧವಾಗಿ ಬಂದೂಕುಗಳನ್ನು ಮತ್ತು ಮಶಿನ್ ಗನ್‌ಗಳನ್ನು ಪಯೋಗಿಸುವದರಿಂದ ಈ ಉದ್ದಿಷ್ಟವು ಸಾಧ್ಯವಾಗಲಾರದೆಂದು ಒತ್ತಿ ಹೇಳಬೇಕಾಗಿದೆ. ಅದೇ ರೀತಿ ಮುಸಲ್ಮಾನೇತರರ ಮನೆಗಳನ್ನು ಆತ್ಮರಕ್ಷಣೆಯ ಭದ್ರಕೋಟೆಗಳನ್ನಾಗಿ ಮಾರ್ಪಡಿಸುವದರಿಂದಲೂ ಉದ್ದಿಷ್ಟ ಸಾಧ್ಯವಾಗಲಾರದು. ಜನಸಾಮಾನ್ಯರನ್ನು ಪುಂಡಾಟಿಕೆ ಪ್ರವೃತ್ತಿಯಿಂದ ಮುಕ್ತ ಮಾಡಬೇಕು. ವಿವೇಕದಿಂದ ಆತ್ಮಶುದ್ಧಿ ಮಾಡಿಕೊಂಡು ಶಾಂತ ಮತ್ತು ಸಭ್ಯ ಜೀವನವನ್ನು ಅವರು ಸಾಗಿಸುವಂತೆ ಮಾಡಬೇಕು. ಮುಸಲ್ಮಾನರೆ ಇದನ್ನು ಹೆಚ್ಚು ಪರಿಣಾಮಕಾರಕವಾಗಿ ಮಾಡಬಲ್ಲರು.

"ಇದಕ್ಕಾಗಿ ಅಖಿಲ ಭಾರತ ಮಜಲೀಸ ಎ ಅಹರಾರ ಎ ಇಸ್ಲಾಮು ಸಂಘದವರು ತಮ್ಮ ಶಿಸ್ತಿನ ಸ್ವಯಂಸೇವಕರನ್ನು ಕೂಡಲೆ ಈ ಪೀಡಿತ ಪ್ರದೇಶಗಳಿಗೆ ಕಳಿಸಲು ಸಿದ್ಧರಾಗಿದ್ದಾರೆ. ತಪ್ಪು ದಾರಿ ಹಿಡಿದ ಬಂಧುಗಳನ್ನು ಆದಷ್ಟು ಬೇಗ ಸರಳ ಮಾರ್ಗಕ್ಕೆ ತಂದು ಪ್ರಾಂತದಲ್ಲಿ ಶಾಶ್ವತ ಶಾಂತಿಯ ತಳಹದಿಯನ್ನು ಹಾಕುವದೆ ಸ್ವಯಂಸೇವಕರನ್ನು ಕಳಿಸುವದರ ಉದ್ದೇಶವಾಗಿದೆ.

"ಈ ಮಾರ್ಗದಲ್ಲಿ ಅನೇಕ ಅಡೆತಡೆಗಳಿರುವವೆಂದು ನನಗೆಗೊತ್ತಿದೆ. ಆದರೆ ಕರ್ತವ್ಯ ಮಾಡುವಾಗ ಕಷ್ಟ ತೊಂದರೆಗಳನ್ನು ಯಾವ ನಿಜ ಮುಸಲ್ಮಾನನೂ ಎಣಿಸಿರುವದಿಲ್ಲ ಎಣಿಸತಕ್ಕದ್ದಲ್ಲ. ಇದರ ವ್ಯವಸ್ಥೆಯನ್ನೆಲ್ಲ ಮಾಡುವದಕ್ಕಾಗಿ ನಾನು ಅ. ಭಾ. ಮಜಲೀಸ ಎ ಅಹರಾರ ಸಂಘದ ಅಧ್ಯಕ್ಷ ಮೌಲಾನಾ ಅತೌಲಾಶಾ ಬುಖಾರಿಯವರೊಡನೆ ಮಾತುಕತೆ ನಡೆಸಿರುವೆ. ಅದೇ ರೀತಿ ಮೌಲಾನಾ ಅಬುಲ್‌ಕಲಂ ಅಜದ ಮತ್ತು ಅಖಿಲ ಭಾರತ ಜಮೇತ—ಉಲ್—ಉಲೇಮಾ ಈ ಹಿಂದ ಸಂಸ್ಥೆಯ ಅಧ್ಯಕ್ಷ ಮೌಲಾನಾ ಹುಸೇನ ಅಹಮದ ಮದಾನಿಯವರೊಡನೆಯೂ ನಾನು ಮಾತುಕತೆ ನಡೆಸಿರುವೆನು ಪರಮಾತ್ಮನ ಕೃಪೆಯಿಂದ ಮೊದಲನೆ ತಂಡ ದಿಲ್ಲಿಯಿಂದ ಬೇಗ ಹೊರಡುವದು."

ಮೌಲಾನಾ ಸಾಹೇಬರೇ ನಾಲ್ಕು ದಿನಗಳ ಹಿಂದೆ ಕೆಳಗಿನ ಪ್ರಕಟನೆಯನ್ನು ಹೊರಡಿಸಿರುವರು.

" ಕಲಕತ್ತೆಯಲ್ಲಿ ನಡೆದ ಭೀಕರ ಹತ್ಯಾಕಾಂಡದಿಂದ ಬಂಗಾಲವು ಬೇಗ ಎಚ್ಚರಾಗುವದೆಂದು ಆಸಿಸಲಾಗಿತ್ತು. ಆದರೆ ಪೂರ್ವ ಬಂಗಾಲದಲ್ಲಿಯ ಭಯಂಕರ ಘಟನೆಗಳಿಂದ ಆ ಆಸೆಯೆಲ್ಲ ಹರಿದುಹೋಗಿದೆ. ಕೊಳ್ಳಿ, ಕೊಲೆ,

—೮ನೇ ಪುಟಕ್ಕೆ

# ಇಸ್ಲಾಮು ವಿರೋಧಿ

(೭ನೇ ಪುಟದಿಂದ)

ಸುಲಿಗೆ, ಜುಲುಮೆಗಳ ಬಗ್ಗೆ ಅಧಿಕಾರೇತರರಿಂದ ಬಂದ ವರದಿಗಳನ್ನೋದಿದರೆ ಮೈಮೇಲೆ ರೋಮಾಂಚಗಳೇಳುತ್ತವೆ. ಈ ಘಟನೆಗಳು ಸಂಭವಿಸಿದ್ದನ್ನು ಸರಕಾರ ಒಪ್ಪುತ್ತದೆ. ಆದರೆ ಅಧಿಕಾರೇತರರ ವರದಿಯಲ್ಲಿಯ ವಿವರಗಳನ್ನು ಅವರು ಒಪ್ಪುವದಿಲ್ಲ.

"ಸರಕಾರದ ವರದಿಯೇ ಸಾಕಷ್ಟು ಭಯಾನಕವಾಗಿದೆ. ಆದರೆ ಈ ವಿವರಗಳೆಲ್ಲ ಸಿದ್ಧವಾದರೆ ಈ ದುರಂತಗಳಿಗೆ ಹೊಣೆಗಾರರಾದ ಜನರ ಮೇಲೆ ಭೀಕರ ದೋಷಾರೋಪಗಳು ಸಿದ್ಧವಾಗುತ್ತವೆ. ಸ್ತ್ರೀಯರ ಮಾನರಕ್ಷಣೆಯ ತಳಹದಿಯಲ್ಲಿಯ ಎಲ್ಲ ನಾಗರಿಕ ಸಮಾಜಗಳು ಸಂಘಟಿತವಾಗಿವೆ. ಸ್ತ್ರೀಯರ ಮಾನಭಂಗ ಮಾಡುವ ಯಾವನೇ ಮನುಷ್ಯನು ಪಶುವೆಂದು ಗಣಿಸಲ್ಪಟ್ಟು ಎಲ್ಲರ ಖಂಡನೆಗೆ ಗುರಿಯಾಗುವನು. ಇಂಥ ಸಂದರ್ಭಗಳಲ್ಲಿ ಅಲ್ಪಸಂಖ್ಯಾಕರಿಗೆ ವಿಶಿಷ್ಟ ಹಕ್ಕುಗಳಿವೆ. ಅವರ ಅಂಜಿಕೆ ಅಳುಕುಗಳೆಲ್ಲ ಇಲ್ಲದಂತೆ ವರ್ತಿಸುವದು ಬಹುಸಂಖ್ಯಾಕರ ಕರ್ತವ್ಯವಾಗಿದೆ. ಅಲ್ಪಸಂಖ್ಯಾಕರ ಮೇಲೆ ಕೈಯೆತ್ತುವಲ್ಲಿ ಇಲ್ಲವೆ ಅವರನ್ನು ಪೀಡಿಸುವಲ್ಲಿ ಯಾವದೆ ಬಗೆಯ ಶೌರ್ಯ ಇಲ್ಲವೆ ಗೌರವವಿಲ್ಲ.

"ಭೀಷಣ ಅತ್ಯಾಚಾರಗಳನ್ನೆಸಗುವಾಗ ಧರ್ಮದ ಹೆಸರುಮುಂದೆ ಮಾಡುತಿರುವದುಹೆಚ್ಚು ದುಃಖದ ಸಂಗತಿಯಾಗಿದೆ. ಒತ್ತಾಯದಿಂದ ಮಾಡಿದ ಧರ್ಮಾಂತರ ಮತ್ತು ಮದುವೆಗಳ ವರದಿ ಬಂದಿವೆ. ಧರ್ಮದ ವಿಷಯದಲ್ಲಿ ಯಾವ ಧರ್ಮವೂ ಇಸ್ಲಾಂ ಧರ್ಮದಂತೂ ಒತ್ತಾಯ, ಹಿಂಸೆಯನ್ನು ವಿಧಿಸುವದಿಲ್ಲ. ಇಸ್ಲಾಮು ಧರ್ಮದ ಅತ್ಯಂತ ವಿಶುದ್ಧತೆಯ ಪ್ರತಿನಿಧಿಗಳಂತಿದ್ದ ಪ್ರಾಚೀನ ಖಲೀಫರ ಕಾಲದಲ್ಲಿ ಸಹಿಷ್ಣುತೆ ಖ್ಯಾತಿಹೊಂದಿದ್ದಿತು. ಜ್ಯೂ ಮತ್ತು ಕ್ರಿಶ್ಚನ್‌ರಂಥ ಅಲ್ಪಸಂಖ್ಯಾಕರಿಗೆ ಸಂರಕ್ಷಣೆ ಭದ್ರತೆಗಳಿದ್ದವು. ಮಧ್ಯಯುಗದಲ್ಲಿ ಯುರೋಪದಲ್ಲಿಯ ಕ್ರಿಶ್ಚನ್ ದೇಶಗಳಲ್ಲೆಲ್ಲ ಜ್ಯೂಗಳ ಛಲನೆಯು ಹೆಚ್ಚಾಗಿ ನಡೆದಿರುವಾಗ ಸ್ಪೇನದ ಮುಸಲ್ಮಾನ ರಾಜ್ಯದಲ್ಲಿ ಮತ್ತು ಹಿಂದುಗಡೆ ಟರ್ಕಿಯಲ್ಲಿ ಅವರಿಗೆ ಸುರಕ್ಷಿತತೆ ಮತ್ತು ಸುಭದ್ರತೆಗಳಿದ್ದವು.

"ಇಸ್ಲಾಮು ಧರ್ಮ ಇಷ್ಟೊಂದು ಹಬ್ಬಬೇಕಾದರೆ ಒತ್ತಾಯ ಮತ್ತು ಜುಲುಮೆಗಳೆ ಕಾರಣವೆಂದು ಅದರ ನಿಂದಕರು ಹಲವು ಸಲ ಹೇಳುವದುಂಟು. ಆದರೆ ಧರ್ಮದ ವಿಷಯದಲ್ಲಿ ಯಾವದೇ ಬಗೆಯ ಒತ್ತಾಯವನ್ನೇ ಮಾಡಕೂಡದೆಂಬ ಕುರಾಣದಲ್ಲಿಯ ನಿಃಸಂದಿಗ್ಧ ಆದೇಶದಿಂದ ಇವರೆಲ್ಲರ ಹೇಳಿಕೆ ನಿರಾಕೃತವಾಗುತಿದೆ. ಆದುದರಿಂದ ಆ ಆದೇಶದ ವಿರುದ್ಧ ವರ್ತಿಸುವವರೆಲ್ಲ ಇಸ್ಲಾಮು ಮತ್ತು ಮುಸಲ್ಮಾನ ಧರ್ಮ ಪ್ರಗತಿಗೆ ದೊಡ್ಡ ಅಪಕಾರ ಮಾಡಿದ ದೋಷಕ್ಕೆ ಗುರಿಯಾಗುವರು.

"ತಮ್ಮ ದೇಶ ಮತ್ತು ಜಾತಿಯನ್ನು ಪ್ರೀತಿಸುವ ಮುಸಲ್ಮಾನರು ಮತ್ತು ಹಿಂದುಗಳು ಪರಿಸ್ಥಿತಿಯ ಬಗ್ಗೆ ಶಾಂತ ಮತ್ತು ನಿರ್ವಿಕಾರ ಮನಸ್ಸಿನಿಂದ ವಿಚಾರಮಾಡಬೇಕೆಂದು ನಾನು ಒತ್ತಾಯದಿಂದ ಹೇಳಬಯಸುವೆ. ಈ ದೇಶದಲ್ಲಿ ಅವರೆಲ್ಲ ಕೂಡಿಕೊಂಡೇ ಇರಬೇಕಾಗಿದೆ. ಮತ್ತು ಯಾವ ಸರಕಾರವೂ ಬಹಳ ದಿನಗಳ ವರೆಗೆ ಅವ್ಯವಸ್ಥೆ ಮತ್ತು ಅರಾಜಕತೆಯನ್ನು ಸಹಿಸಲಾರದು. ಜಾತೀಯ ದಂಗೆಗಳು ಎಲ್ಲಿಯಾದರೂ ನಡೆದರೆ ಬೇಗ ಇಲ್ಲವೆ ತಡಮಾಡಿಯಾದರೂ ಸರಕಾರದವರು ಪೋಲೀಸರ ಉಪಯೋಗ ಮಾಡಿ ಅವಶ್ಯವೆನಿಸಿದರೆ ಸೈನಿಕರ ಸಹಾಯ ತೆಗೆದುಕೊಂಡು ಅದನ್ನು ಹತ್ತಿಕ್ಕುವರು. ಆದರೆ ಇದರಿಂದ ಬೇನೆ ಹತ್ತಿಕ್ಕಲ್ಪಡಬಹುದು ಆದರೆ ವಾಸಿಯಾಗಲಾರದು.

"ಇವೆಲ್ಲ ದುರಂತಗಳನ್ನು ನಿರ್ಮೂಲ ಮಾಡಬೇಕಾದರೆ ಆಯಾ ಪ್ರದೇಶಗಳಲ್ಲಿದ್ದ ಬಹುಸಂಖ್ಯಾಕರು ಅಲ್ಪಸಂಖ್ಯಾಕರಿಗೆ ಸಂರಕ್ಷಣೆಯ ಆಶ್ವಾಸನ ಕೊಡಬೇಕು. ಅರಾಜಕತೆಯನ್ನು ನಿಲ್ಲಿಸಲು ಪೋಲೀಸ ಮತ್ತು ಸೈನಿಕರು ಬರುವ ಹಾದಿಯನ್ನು ನೋಡದೆ ಬಹುಸಂಖ್ಯಾಕ ಜಾತಿಯ ಹೊಣೆಗಾರ ಜನರು ಈ ಪುಂಡರನ್ನೆ ದುರಿಸಿ. ಆ ಪ್ರದೇಶದಲ್ಲಿಯ ಅಲ್ಪಸಂಖ್ಯಾಕರ ವಿತ್ತ ಜೀವಿತಗಳನ್ನು ಮತ್ತು ಮರ್ಯಾದೆಯನ್ನು ರಕ್ಷಿಸಬೇಕು. ಇದರಿಂದ ಇಡೀ ದೇಶದ ವಾತಾವರಣವೇ ಬದಲಾಗುವದು.

"ಪೂರ್ವ ಬಂಗಾಲದ ಮುಸಲ್ಮಾನ ಬಂಧುಗಳನ್ನುದ್ದೇಶಿಸಿ ನಾನು ವಿಶಿಷ್ಟ ಬಿನ್ನಹವನ್ನು ಮಾಡಬಯಸುವೆ. ನೆರೆಹೊರೆಯವನ ಸಂರಕ್ಷಣೆಯು ಪ್ರತಿಯೊಬ್ಬನ ಧಾರ್ಮಿಕ ಕರ್ತವ್ಯವೆಂದು ಇಸ್ಲಾಮು ವಿಧಿಸುತ್ತದೆ. ನೌಖಾಲಿ ಮತ್ತು ಪೂರ್ವ ಬಂಗಾಲದ ಇತರ ಜಿಲ್ಹೆಗಳಲ್ಲಿ ಮುಸಲ್ಮಾನರು ಅತೀವ ಬಹುಸಂಖ್ಯಾಕರಾಗಿರುವರು. ಈ ಪ್ರದೇಶದಲ್ಲಿಯ ಸಜ್ಜನರುಕೂಡಿಕೊಂಡು ತಮ್ಮ ಪ್ರಾಣ ಹೋದರೂ ಚಿಂತೆಯಿಲ್ಲ, ನೆರೆಹೊರೆಯುವರನ್ನು ರಕ್ಷಿಸುವದಾಗಿ ಘೋಷಿಸಬೇಕು. ತಮ್ಮ ಹೆಣ ಬೀಳುವ ವರೆಗೆ ಯಾವನೊಬ್ಬನು ಹಿಂದುವಿಗೆ ಅಪಾಯವನ್ನುಂಟು ಮಾಡಲಾರನೆಂದೂ ಸಾರಬೇಕು."

ಈ ಪ್ರಕಟಿನೆಗಳಿಗೆ ಎಷ್ಟು ಜನ ಮುಸಲ್ಮಾನರ ಬೆಂಬಲವಿದೆಂಬುದು ಮುಖ್ಯವಲ್ಲ. ಆದರೆ ಪೂರ್ವ ಬಂಗಾಲದಲ್ಲಿ ಮುಸಲ್ಮಾನರು ಮಾಡಿದ ಅತಿನಿಂದ್ಯ ಕೃತ್ಯಗಳನ್ನು ಇಸ್ಲಾಮು ಧರ್ಮದಲ್ಲಿ ಅತ್ಯಂತ ಖ್ಯಾತಿ ಹೊಂದಿದ ಈ ಮುಸಲ್ಮಾನರು ತೀವ್ರ ಶಬ್ದಗಳಲ್ಲಿ ಖಂಡಿಸುತಿರುವರೆಂಬುದು ಮಹತ್ವದ್ದಾಗಿದೆ. ಈ ದುಷ್ಕೃತ್ಯ ಮಾಡಿದವರೆಲ್ಲ ಪುಂಡರೆಂದು ಮುದ್ರೆಯೊತ್ತಿ ಬಿಡುವದು ತಪ್ಪಾಗುವದು. ತಪ್ಪು ಮಾಡಿದವರು ನಿಃಸಂದಿಗ್ಧವಾಗಿ ಹೆಚ್ಚು ತಿಳಿದ ಮನುಷ್ಯರಿಂದ ಅಡ್ಡ ಹಾದಿ ಹಿಡಿಸಲ್ಪಟ್ಟರುವರು. ಸರಳ ಮನಸಿನ ವಿಶ್ವಾಸಿಕ ಮುಸಲ್ಮಾನರ ಮನಸಿನಲ್ಲಿ ತುಂಬಿದ ವಿಷವನ್ನು ಗಮನಿಸಿದರೆ ಅತ್ಯಾಚಾರಗಳು ನಡೆದವೆಂಬದರಲ್ಲಿ ಆಶ್ಚರ್ಯವೇನೂ ಇಲ್ಲ.

ಈ ದುರಂತವನ್ನು ದೂರಗೊಳಿಸಬೇಕಾದರೆ ಇಸ್ಲಾಮುದಲ್ಲಿಯ ಸಮಂಜಸ ಜನರು ಬಿಚ್ಚು ಮನಸಿನಿಂದ ಮಾತಾಡಬೇಕಲ್ಲದೆ ಕೂಡಲೇ ಅದರಂತೆ ಕೃತಿ ಮಾಡಬೇಕು. ಈ ಕಿಡಿಗೇಡಿತನವನ್ನು ಹೋಗಲಾಡಿಸಲು ಸ್ವಯಂಸೇವಕರ ತಂಡವನ್ನು ಕಳಿಸುವದಾಗಿ ನಿರ್ಧರಿಸಿದ್ದ ಅ. ಭಾ. ಮಜಲೀಸ ಅಹರಾರ ಸಂಘದ ಹಿಂದಿನ ಅಧ್ಯಕ್ಷರು ಅದನ್ನು ಕಳಿಸಲು ಸಮರ್ಥರಾಗಿರುವರೊ ಹೇಗೆಂಬುದನ್ನು ತಿಳಿದುಕೊಳ್ಳುವದು ಮನೋರಂಜಕವಾಗಬಹುದು.

ಹೊಸದಿಲ್ಲಿ ಮೋ. ಕ. ಗಾಂಧಿ
೨೩ ಅಕ್ಟೋಬರ ೧೯೪೬

## ಎದೆಗಾರಿಕೆಯ ಉತ್ತರ

ನಾತಾಳದಿಂದ ಬಂದ ಪತ್ರಿಕೆಗಳಲ್ಲಿ ಇತರ ಸುದ್ದಿಗಳೊಡನೆ ದರ್ಬಾನ ಮೇಯರರ ಕಾರ್ಯದರ್ಶಿಯು ನಾತಾಳ ಹಿಂದೀ ಕಾಂಗ್ರೆಸ್ಸಿನ ಕಾರ್ಯದರ್ಶಿಯೊಂದಿಗೆ ನಡೆಸಿದ ಪ್ರಸಿದ್ಧ ಪತ್ರವ್ಯವಹಾರವೊಂದು ಪ್ರಕಟವಾಗಿದೆ. ಬರುವ ವರ್ಷ ಮಾರ್ಚ ತಿಂಗಳಲ್ಲಿ ದರ್ಬಾನವನ್ನು ಸಂದರ್ಶಿಸಲಿರುವ ಬ್ರಿಟಿಶ ಅರಸರನ್ನು ಸ್ವಾಗತಿಸುವದಕ್ಕಾಗಿ ಸಿದ್ಧತೆ ನಡೆಸಲು ಒಂದು ಸಮಿತಿಯು ರಚಿತವಾಗಿದೆ. ಡರ್ಬಾನದ ಆಂಗ್ಲೇತರ ಮತ್ತು ಬಿಳಿಯರಲ್ಲದ ಜನರನ್ನು ಇದರಲ್ಲಿ ನೇಮಿಸಿಕೊಳ್ಳಬಹುದೆ ಎಂಬುದನ್ನು ವಿಚಾರಿಸಲು ಮುಖ್ಯ ಸಮಿತಿಯು ಒಂದು ಉಪಸಮಿತಿಯನ್ನು ನೇಮಿಸಿದೆ. ಹಿಂದೀ ಸಮಾಜಕ್ಕೆ ಬ್ರಿಟಿಶ ಚಕ್ರವರ್ತಿಗಳ ಮತ್ತೂ ರಾಜಕುಮಾರಿಯ ಸಂದರ್ಶನದ ಲಾಭ ದೊರೆಯುವಂತೆ ಸಲಹೆ ಸಹಾಯ ನೀಡಲು ನಾತಾಳ ಹಿಂದೀ ಕಾಂಗ್ರೆಸು ಈ ಉಪಸಮಿತಿಗೆ ತಮ್ಮ ಇಬ್ಬರು ಪ್ರತಿನಿಧಿಗಳನ್ನು ಕಳಿಸಬೇಕೆಂದು ಆ ಸಮಿತಿಯು ಕೇಳಿಕೊಂಡಿತು.

ಈ ಆಮಂತ್ರಣಕ್ಕೆ ನಾತಾಳ ಹಿಂದೀ ಕಾಂಗ್ರೆಸಿನ ಗೌರವ ಸಹಕಾರ್ಯದರ್ಶಿಗಳಾದ ಶ್ರೀ ಮೀರ ಸಾಹೇಬರು ಈ ಕೆಳಗಿನಂತೆ ಎದೆಗಾರಿಕೆಯ ಉತ್ತರವನ್ನು ಕಳೆದ ಸಪ್ಟೆಂಬರ ೧೦ ಕ್ಕೆ ಕಳಿಸಿದ್ದಾರೆ.

"ಇಲ್ಲಿಯ ಹಿಂದೀ ಸಮಾಜದಲ್ಲಿ ಬ್ರಿಟಿಶ ಚಕ್ರವರ್ತಿಗಳು ಮತ್ತು ರಾಜಕುಮಾರಿಯರ ಬಗ್ಗೆ ಆತ್ಮಾದರವಿದ್ದರೂ ದಕ್ಷಿಣ ಆಫ್ರಿಕೆಯ ಹಿಂದೀಯರು ತಮ್ಮ ಇತಿಹಾಸದಲ್ಲಿಯೆ ಅತ್ಯಂತ ಸೂಕ್ಷ್ಮವಾದ ಪರಿಸ್ಥಿತಿಯಲ್ಲಿದ್ದಾರೆಂದು ತಿಳಿಸಬೇಕೆಂದು ನಮ್ಮ ಕಾರ್ಯಕಾರಿ ಮಂಡಳವು ಆಜ್ಞಾಪಿಸಿದೆ. ಮಾನವನ ಮೂಲಭೂತ ಹಕ್ಕುಗಳನ್ನು ನಮ್ಮಿಂದ ಕಸಿದುಕೊಳ್ಳುವದಕ್ಕಾಗಿ ಕಳೆದ ೫೦ ವರ್ಷಗಳಿಂದ ರಚಿತವಾಗುತ್ತ ಬಂದ ಕಟ್ಟಳೆಗಳು ಏಶಿಯನರ ಭೂಧಾರಣ ಕಾಯದೆ, ೧೯೪೬ ರ ಹಿಂದೀ ಪ್ರತಿನಿಧಿಗಳ ಕಾಯದೆಯಲ್ಲಿ ಮುಕ್ತಾಯಹೊಂದಿವೆ. ನಮ್ಮ ಸಮಾಜವು ಅತ್ಯುಗ್ರವಾಗಿ ಪ್ರತಿಭಟಿಸಿದರೂ ಈ ಕಾಯದೆಗಳು ಪಾಸಾದವು. ಯೂನಿಯನ ಸರಕಾರವು ತನ್ನ ಪ್ರಜರಲ್ಲಿ ಮತಾಧಿಕಾರವಿಲ್ಲದವರನ್ನು ಹೀಗೆ ದಬ್ಬಾಳಿಕೆಗೆ ಗುರಿಪಡಿಸಿರುವದರಿಂದ ಇಡೀ ಹಿಂದೀ ಸಮಾಜವು ತೀರ ಅಸ್ವಸ್ಥವಾಗಿದೆ. ಬಿಳಿಯರಲ್ಲದವರ ಬಗ್ಗೆ ಇಲ್ಲಿ ರಚಿತವಾಗಿರುವ ಕಟ್ಟಳೆಗಳನ್ನು ನೋಡಿದರೆ ಈ ದೇಶದಲ್ಲಿ ಅವರಿಗಾಗಿ ಇನ್ನು ಮುಂದೆ ಏನು ಕಾದಿದೆ ಎಂಬುದಕ್ಕೆ ಯಾವ ಸಂದೇಹವೂ ಬೇಡ. ಮನುಷ್ಯನ ತೊಗಲಿನ ಬಣ್ಣವೆ ಅವನ ಗುಣಾವಗುಣಗಳನ್ನು ನಿರ್ಣಯಿಸುವ ಸಾಧನವಾಗಿದೆ.

"ತತ್ಪರಿಣಾಮವಾಗಿ ಈ ದೇಶದ ಕಾಯದೆಗಳಲ್ಲಿಯ ವರ್ಣದ್ವೇಷವನ್ನು ಪ್ರತಿಭಟಿಸುವದಕ್ಕಾಗಿ ಸತ್ಯಾಗ್ರಹವನ್ನು ಹೂಡಬೇಕೆಂದು ದಕ್ಷಿಣ ಆಫ್ರಿಕೆಯ ಹಿಂದೀ ಸಮಾಜವು ೧೯೪೬ ಜೂನ ೧೩ ಕ್ಕೆ ನಿರ್ಧರಿಸಿತು. ಈ ಸತ್ಯಾಗ್ರಹವಿನ್ನೂ ನಡೆದಿದೆ. ಡಾ. ಯುಸೂಫ ದಾದೂ ಮತ್ತು ಡಾ. ಜಿ. ಎಂ. ನಾಯರರಂಥ ೬೨೭ ಸತ್ಯಾಗ್ರಹಿಗಳು ಈಗ ಸೆರೆಮನೆಯಲ್ಲಿದ್ದಾರೆ. ಅವರನ್ನು ಸಾಮಾನ್ಯ ಕೈದಿಗಳಂತೆ ನಡೆಸಿಕೊಳ್ಳಲಾಗುತ್ತಿದೆ. ಇವರಲ್ಲಿ ಕೆಲವರು ಸೆರೆಮನೆಯಲ್ಲಿ ಅಮಾನುಷ ಶಿಕ್ಷೆಗೆ ಗುರಿಯಾಗಿ ತಮ್ಮ ಕಾರಾವಾಸದ ಅವಧಿಯನ್ನು ಮುಗಿಸಿಕೊಂಡು ಹೊರಗೆ ಬಂದಿದ್ದಾರೆ. ಆದರೆ ಇನ್ನೂ ನೂರಾರು ಜನರು ಸೆರೆಮನೆಯಲ್ಲಿದ್ದಾರೆ. ದಿನಾಲೂ ಸತ್ಯಾಗ್ರಹಿಗಳನ್ನು ಸೆರೆಮನೆಗೆ ಕಳಿಸಲಾಗುತ್ತಿದೆ.

"ಬ್ರಿಟಿಶ ಚಕ್ರವರ್ತಿಗಳ ಸಾಮ್ರಾಜ್ಯದಲ್ಲಿ ಹಿಂದೀಯರಿಂತು ದುಮ್ಮಾನದ ಪರಿಸ್ಥಿತಿಯಲ್ಲಿರುವಾಗ ಚಕ್ರವರ್ತಿಗಳ ಗೌರವನಿಮಿತ್ತ ನಡೆಯಲಿರುವ ಆನಂದೋತ್ಸವಗಳಲ್ಲಿ ಅವರು ಭಾಗವಹಿಸಬೇಕೆಂದು ಅಪೇಕ್ಷಿಸುವದು ತೀರಅನುಚಿತವಾದದ್ದು. ಆದ್ದರಿಂದ ದಕ್ಷಿಣ ಆಫ್ರಿಕೆಯ ರಾಜಪ್ರಜರಲ್ಲಿ ಬಿಳಿಯ—ಕರಿಯರಲ್ಲಿ, ಪ್ರಾತಿನಿಧ್ಯ ಪಡೆದ—ಪಡೆಯದ, ಸೌಕರ್ಯವಿದ್ದ ಇರದ ಜನರಲ್ಲಿ ಸೌಹಾರ್ದ ಸದಿಚ್ಛೆಗಳುಂಟಾಗಿ ದಕ್ಷಿಣಆಫ್ರಿಕೆಯ ಪರಿಶ್ರಮದಫಲಗಳನ್ನು ಎಲ್ಲರೂ ಸರಿಯಾಗಿ ಅನುಭವಿಸುವ ಕಾಲ ಬರುವವರೆಗೆ ಚಕ್ರವರ್ತಿಗಳು ತಮ್ಮ ಸಂದರ್ಶನವನ್ನು ಮುಂದೆ ಹಾಕಬೇಕೆಂದು ನೀವು ಅವರಿಗೆ ಕೇಳಿಕೊಳ್ಳಬೇಕೆಂದು ನಾವೀಗ ಸೂಚಿಸಬಲ್ಲೆವು."

ಇಂಥ ಉತ್ತರವನ್ನು ಕೊಟ್ಟದ್ದಕ್ಕಾಗಿ ನಾತಾಳ ಕಾಂಗ್ರೆಸ ಕಾರ್ಯಕಾರಿ ಮಂಡಳವು ಅಭಿನಂದನಕ್ಕೆ ಪಾತ್ರವಾಗಿದೆ. ದಕ್ಷಿಣಆಫ್ರಿಕೆಯ ಭವಿತವ್ಯವನ್ನು ರೂಪಿಸುವಲ್ಲಿ ಯಾವ ಅಧಿಕಾರವಿಲ್ಲದ ಜನರಿಗೆ ಮತ್ತು ಸ್ವಾಭಿಮಾನಕ್ಕಾಗಿ ಹೋರಾಡುತ್ತಿರುವವರಿಗೆ ಚಕ್ರವರ್ತಿಗಳ ಈ ಸಂದರ್ಶನದಿಂದ ಯಾವ ಸಂತೋಷವೂ ಆಗಲಾರದು. ವರ್ಣದ್ವೇಷವು ಮರೆತುಹೋಗುವ ಶುಭಸಮಯದ ವರೆಗೆ ಚಕ್ರವರ್ತಿಗಳು ತಮ್ಮ ಸಂದರ್ಶನವನ್ನು ಮುಂದೆ ಹಾಕಲಿ ಎಂದು ಆಶಿಸೋಣ.

"ಓ ನಮ್ಮ ದೇವನೆದ್ದೇಳು
ಅವನತಿಗಳನು ನೀ ಸೀಳು,
ಕೆಡಿಸವರ ರಾಜಕಾರಣವ
ಮತ್ತೆಲ್ಲ ಕುಟಿಲನಾಟಕವ
ನಿನ್ನನೇ ನಾವು ನಂಬಿಹೆವು
ಕಾಪಾಡು ನಮ್ಮನೆಂದಿಹೆವು"

ಎಂದು ಬ್ರಿಟಿಶ ರಾಷ್ಟ್ರಗೀತೆಯಲ್ಲಿದ್ದ ಹಳೆಯ ನಿರರ್ಥಕ ಸಾಲುಗಳನ್ನು ಕಿತ್ತಿಹಾಕಿ

"ಈ ಜಗದನಂತ ಭಾಗದಲಿ
ದೇವನಾ ಕರುಣೆ ತುಂಬಿರಲಿ.
ನರರೆಲ್ಲ ಬಾಂಧವರು ಎಂಬ
ಜಗವೊಂದೆ ಮನೆಯು ತಾನೆಂಬ
ಭಾವನೆಯು ನಾಡುನಾಡಿನಲಿ
ಬೆಳೆವಂತೆ ದೇವ ಕರುಣಿಸಲಿ"

ಎಂಬ ಹೊಸ ಸಾಲಗಳನ್ನು ಸಾರಿದ ಬ್ರಿಟಿಶ ಚಕ್ರವರ್ತಿಗಳು ದಕ್ಷಿಣ ಆಫ್ರಿಕೆಯ ಸಂದರ್ಶನವನ್ನು ಬಿಟ್ಟುಗೊಡುವ ತ್ಯಾಗದನ್ನು ತೋರಿದರೆ ಅದು ಅವರ ಸ್ವಭಾವಕ್ಕೆ ತಕ್ಕದ್ದೇ ಆದೀತು.

ಹೊಸದಿಲ್ಲಿ ಮೋ. ಕ. ಗಾಂಧಿ
೨೫-೧೦-೪೬

## ಸತ್ಯಾರ್ಥ ಪ್ರಕಾಶಕ್ಕೆ ಸಿಂಧದ ನಿರ್ಬಂಧ

ಸತ್ಯಾರ್ಥಪ್ರಕಾಶದ ಮೇಲಿನ ನಿರ್ಬಂಧದ ಅವಧಿ ಕೊನೆಗಂಡಿದ್ದು ಅದಿನ್ನು ಪುನರುಜ್ಜೀವಿಸಲ್ಪಡಲಾರದೆಂದು ಆಶಿಸಲಾಗಿತ್ತು. ಆದರೆ ಅದು ನಿರಾಸೆಯಾಯಿತು. ನಿರ್ಬಂಧ ಮತ್ತೆ ಹೇರಲ್ಪಟ್ಟಿತು. ಅದು ಇಂತಿದೆ.

ಸತ್ಯಾರ್ಥಪ್ರಕಾಶವೆಂಬ ಸಿಂಧೀ ಪುಸ್ತಕದಲ್ಲಿಯ ೧೪ ನೇ ಪ್ರಕರಣವು ಚಕ್ರವರ್ತಿ ಸರಕಾರದ ಬೇರೆ ಬೇರೆ ವರ್ಗಗಳ ಪ್ರಜೆಗಳಲ್ಲಿ ದ್ವೇಷ ಇಲ್ಲವೆ ಮತ್ಸರದ ಭಾವನೆಗಳನ್ನುದ್ದೀಪಿಸುವದೆಂದು ಸಿಂಧ ಸರಕಾರಕ್ಕೆ ಕಂಡು ಬಂದದ್ದರಿಂದ ೧೮೯೮ ನೇ ಇಸ್ವಿಯ ಕ್ರಿಮಿನಲ್ ಪ್ರೊಸೀಜರ ಕೋಡಿನ ೯೯ ಅ ಕಲ್ಮಿನನ್ವಯ ದೊರೆತ ಅಧಿಕಾರದನ್ವಯ ಸ್ವಾಮಿ ದಯಾನಂದ ಸರಸ್ವತಿಯವರು ಬರೆದ ಮತ್ತು ಪ್ರತಿನಿಧಿ ಸಭೆ ಸಿಂಧ ಕರಾಚಿ ಇದರ ಪರವಾಗಿ ಪ್ರೊ. ತಾರಾಚಂದ ಡಿ. ಗಜ್ರೆ ಎಂ. ಎ. ಇವರು ಪ್ರಸಿದ್ಧಿಸಿದ ಸತ್ಯಾರ್ಥ ಪ್ರಕಾಶವೆಂಬ ಸಿಂಧೀ ಪುಸ್ತಕವ ಎಲ್ಲ ಪ್ರತಿಗಳನ್ನು ಸಿಂಧ ಸರಕಾರದವರು ಜಪ್ತ ಮಾಡಿದ್ದಾರೆ. ಈ ಪುಸ್ತಕದ ಪುನರ್ಮುದ್ರಣ, ಭಾಷಾಂತರ ಅಥವಾ ೧೪ ನೇ ಪ್ರಕರಣದ ಪುನರ್ಮುದ್ರಣ ಮುಂತಾದ್ದೆಲ್ಲವನ್ನು ನಿರ್ಬಂಧಿಸಲಾಗಿದೆ. ಏಕೆಂದರೆ ಈ ಪುಸ್ತಕದ ಹದಿನಾಲ್ಕನೆಯಪ್ರಕರಣದಲ್ಲಿ ಗ್ರಂಥಕರ್ತರು—

ಅ) ಮುಸಲ್ಮಾನರ ಕೆಲ ಧಾರ್ಮಿಕ ನಂಬಿಕೆಗಳನ್ನು ಕೀಳ್ಗಳೆದಿದ್ದಾರೆ.

ಬ) ಕುರಾಣದ ಸಂದೇಶಗಳನ್ನು ತಪ್ಪಾಗಿ ಹೇಳಿ ನಿಂದಿಸಿದ್ದಾರೆ.

ಕ) ಮಹಮ್ಮದ ಪೈಗಂಬರರ ಅಧಿಕಾರವನ್ನು ಟೀಕಿಸಿ ಅದನ್ನು ಕೀಳ್ಗಳೆದಿದ್ದಾರೆ.

ಡ) ಮುಸಲ್ಮಾನರ ಧಾರ್ಮಿಕ ಭಾವನೆಗಳನ್ನು ಹಿಂಸಿಸುವ ವಿಷಯ, ಸಾಮಾನ್ಯವಾಗಿ ಇರುವವು"

ಮೊದಲಿನಕಿಂತ ಈ ಹುಕುಮು ಹೆಚ್ಚು ವ್ಯಾಪಕವಾಗಿದೆ. ೧೪ನೇ ಪ್ರಕರಣವುಳ್ಳ ಪುಸ್ತಕವನ್ನು ಮುದ್ರಿಸುವದು ಪ್ರಕಟಿಸುವದು ಅಪರಾಧವೆಂದು ಹಿಂದಿನ ನಿರ್ಬಂಧ ವಿಧಿಸುತಿತ್ತು. ಇದರ ಪ್ರತಿಗಳನ್ನಿಟ್ಟುಕೊಳ್ಳುವದೇ ಅಪರಾಧವೆಂದು ಈಗಿನ ನಿರ್ಬಂಧ ವಿಧಿಸುತ್ತದೆ. ಈ ನಿರ್ಬಂಧ ಅವಿವೇಕತನದಾಗಿದ್ದು ಜಗತ್ತಿನಲ್ಲೆಲ್ಲ ಆರ್ಯ ಸಮಾಜದವರ ಭಾವನೆಗಳನ್ನು ಹಿಂಸಿಸುವತಿದೆ. ಕುರಾಣ ಮುಸಲ್ಮಾನರಿಗೆ ಮತ್ತು ಕ್ರಿಶ್ಚನ್‌ರಿಗೆ ಬಾಯಿಬಲ್ ಎಷ್ಟು ಪವಿತ್ರ ಗ್ರಂಥವಾಗಿವೆಯೊ ಸತ್ಯಾರ್ಥ ಪ್ರಕಾಶ ಆರ್ಯ ಸಮಾಜದವರಿಗೆ ಪವಿತ್ರ ಗ್ರಂಥವಾಗಿದೆ, ವಿವಾದಕ್ಕಾಸ್ಪದವಾಗಿರುವ ಸಮಕಾಲೀನ ಸಾಹಿತ್ಯದ ಮೇಲೆ ನಿರ್ಬಂಧ ಹಾಕುವದರಲ್ಲಿ ಸ್ವಲ್ಪ ಔಚಿತ್ಯ ತೋರಬಹುದು. ಸದ್ಯದ ಜನತಾ ಸರಕಾರಗಳು ಇಂಥ ಸಂದರ್ಭದಲ್ಲಿಯೂ ತಮ್ಮ ಅಧಿಕಾರ ನಡೆಸಲು ಒಪ್ಪುವದಿಲ್ಲೆಂಬ ಮಾತು ಬೇರೆ. ಶ್ರುತಿ ಗ್ರಂಥವನ್ನು ನಿರ್ಬಂಧಿಸುವದು ಕಿಡಿಗೇಡಿತನವೆಂದು ತೋರುವದು. ಆದುದರಿಂದ ಸಿಂಧ ಸರಕಾರದವರು ಈ ನಿರ್ಬಂಧವನ್ನು ಹಿಂತೆಗೆದುಕೊಳ್ಳಬೇಕೆಂದು ಒತ್ತಾಯ ಪಡಿಸುತ್ತೇನೆ. ಅನೇಕ ಆವೃತ್ತಿಗಳನ್ನು ಕಂಡ ಹಾಗು ಜಗತ್ತಿನಲ್ಲಿಯ ಬೇರೆ ಬೇರೆ ಭಾಷೆಗಳಲ್ಲಿ ಅನುವಾದಿಸಲ್ಪಟ್ಟ ಪುಸ್ತಕವು ಇಂದು ಬೇರೆ ಬೇರೆ ಜಾತಿಗಳ ಭಾವನೆಗಳನ್ನು ಹಿಂಸಿಸುತಿದೆಂದು ಈಗ ಕಂಡು ಬಂದುದು ಆಶ್ಚರ್ಯಕರವಾಗಿದೆ. ಸಹಿಷ್ಣುತೆ ವಿಶೇಷತಃ ಧಾರ್ಮಿಕ ವಿಷಯಗಳಲ್ಲಿ ಎಂದೂ ನೋವನ್ನುಂಟು ಮಾಡಲಾರದು. ಧಾರ್ಮಿಕ ಅಭಿಪ್ರಾಯಗಳಲ್ಲಿ ಭಿನ್ನಾಭಿಪ್ರಾಯ ಕೊನೆಯವರೆಗೆ ಇದ್ದುದೆ. ಬೇರೆ ಬೇರೆ ಜಾತೀಯ ಜನರನ್ನು ಒಳ್ಳೆ ನೆರೆಹೊರೆಯವರಂತೆ ಮತ್ತು ಗೆಳೆಯರಂತೆ ಇರಲು ಸಹಿಷ್ಣುತೆಯೇ ಅವಕಾಶ ಕಲ್ಪಿಸಿಕೊಡುತ್ತದೆ. ಟೀಕಾಕಾರರು ಎಷ್ಟೇ ಒಳ್ಳೆ ಇಲ್ಲವೆ ಕೆಟ್ಟ ಟೀಕೆ ಮಾಡಿದರೂ ಧರ್ಮಕ್ಕೆ ಯಾವದೇ ಬಗೆಯ ಹಾನಿಯಾಗದು. ಆದರೆ ಅನುಯಾಯಿಗಳ ಅಲಸ್ಯದಿಂದ ಇಲ್ಲವೆ ಅನಾಸ್ಥೆಯಿಂದ ಅದಕ್ಕೆ ಯಾವಾಗಲೂ ಹಾನಿ ತಟ್ಟುವುದುಂಟು.

ಹೊಸದಿಲ್ಲಿ ಮೋ. ಕ. ಗಾಂಧಿ
೨೬—೧೦—೧೯೪೬



# ಸಕಾಲಿಕ ಸಂದರ್ಶನ

ಮಹಾತ್ಮಾ ಗಾಂಧಿಯವರು ಇದೇ ಅಕ್ಟೋಬರ ೨೧ ಕ್ಕೆ ಹೊಸದಿಲ್ಲಿಯ ಭಂಗಿ ವಸತಿಯಲ್ಲಿ ಶ್ರೀ ಫ್ರೆಸ್ಟನ್‌ಗೊವರರಿಗೆ ಸಂದರ್ಶನ ಕೊಟ್ಟರು. ಅಮೇರಿಕೆಯ ಅಸೋಸಿಯೇಟೆಡ್ ಪ್ರೆಸ್ಸಿನವರು ಪ್ರಕಟಿಸಿದ ಸಂದರ್ಶನದ ತರ್ಜುಮೆಯಿದು.

### ಪೂರ್ವ ಬಂಗಾಲ

ಪೂರ್ವ ಬಂಗಾಲದಲ್ಲಿ ನಡೆದ ದುರಂತವನ್ನು ನಿಯಂತ್ರಿಸಲು ಬಂಗಾಲದಲ್ಲಿಯ ಮುಸ್ಲಿಂ ಲೀಗ ಮಂತ್ರಿಮಂಡಳವು ಸಮರ್ಥವಾಗಬೇಕೆಂದು ಮಹಾತ್ಮಾ ಗಾಂಧಿಯವರು ಒಂದು ಸಂದರ್ಶನದಲ್ಲಿ ಈ ದಿನ ಹೇಳಿದರು. ಈ ದುರಂತದಲ್ಲಿ ಸಾವಿರಗಟ್ಟಿ ಜನ ತಮ್ಮ ಮನೆಮಾರು ಬಿಟ್ಟು ನಿರಾಶ್ರಿತರಾಗಿರುವರು ಮತ್ತು ಅನಿರ್ದಿಷ್ಟ ಸಂಖ್ಯಾಕ ಜನರು ಮರಣಹೊಂದಿರುವರು ಇಲ್ಲವೆ ಅಪಹರಿಸಲ್ಪಟ್ಟಿರುವರು.

'ನಿಯಂತ್ರಣವು ಆಯಾ ಮಂತ್ರಿಮಂಡಳವನ್ನವಲಂಬಿಸುತ್ತದೆ' ಎಂದು, ಮುಸ್ಲಿಂ ಲೀಗಿನ ಎಚ್. ಎಸ್. ಸುರಹರ್ದಿಯವರು ಮುಖಂಡರಾಗಿರುವ ಬಂಗಾಲ ಮಂತ್ರಿಮಂಡಳವನ್ನು ಲ್ಲೇಖಿಸುತ್ತ ಅವರು ಹೇಳಿದರು. "ಮುಸ್ಲಿಂ ಲೀಗ ಅದನ್ನು ನಿಯಂತ್ರಿಸಬಯಸಿದರೆ ಹಾಗೆ ಮಾಡಬಲ್ಲುದೆಂದು ನನಗನಿಸುತ್ತದೆ. 'ಮುಸ್ಲಿಂ ಲೀಗಿನವರಿಗೆ ಪ್ರಚಂಡ ಮುಸಲ್ಮಾನ ಮತದಾರರ ಬೆಂಬಲವಿದೆಂ'ಬದನ್ನು ಅವರು ನೆನಪಿಗೆ ತಂದುಕೊಟ್ಟರು.

ಬಂಗಾಲದ ದುರಂತ 'ಹೃದಯದ್ರಾವಕ'ವಾಗಿದೆಂದು ಅವರು ವರ್ಣಿಸಿದರು.

ಬ್ರಿಟಿಶ ಶಿಷ್ಟಮಂಡಳದವರು ಮಾರ್ಚ ತಿಂಗಳಲ್ಲಿ ಇಲ್ಲಿಗೆ ಬಂದಂದಿನಿಂದ ಮಹಾತ್ಮರು ಯಾವ ಕೋಣೆಯಲ್ಲಿ ಹೆಚ್ಚಾಗಿ ವಾಸಿಸುತಿರುವರೊ ಅಂಥ ಭಂಗಿ ವಸತಿಯಲ್ಲಿಯ ಸಣ್ಣ ಕೋಣೆಯಲ್ಲಿಯೆ ಅವರು ಪೂರ್ವ ಬಂಗಾಲದಲ್ಲಿ ನಡೆದ ಸುಲಿಗೆ ಕೊಳ್ಳೆ ಮತ್ತು ದರೋಡೆ ಮೊದಲಾದವುಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದರು. ಮುಂದೆ ಒಂದು ಇಳಿಜಾರಾದ ಡೆಸ್ಕನ್ನು ಇಟ್ಟುಕೊಂಡು ಅವರು ಮೆತ್ತಗಿನ ಒಂದು ಚಾಪೆಯ ಮೇಲೆ ಕುಳಿತುಕೊಂಡರು. ನಾನು ಅವರ ಎದುರಿಗೆ ನೆಲದ ಮೇಲೆ ಕುಳಿತೆನು. ಆಗ ಅವರು ಅಮೇರಿಕೆ,ಹಿಂದುಸ್ತಾನದಲ್ಲಿಯ ಹೊಸ ಸರಕಾರ, ದಕ್ಷಿಣ ಆಫ್ರಿಕೆ ಮತ್ತು ತಮ್ಮ ಆರೋಗ್ಯ ಮುಂತಾದ ಅನೇಕ ವಿಷಯಗಳ ಬಗ್ಗೆ ಮಾತಾಡಿದರು.

ಪಂಡಿತ ನೆಹರು ಇವರನ್ನು ಕಂಡ ಬಳಿಕ ಮತ್ತು ಕೇಂದ್ರ ಮಂತ್ರಿಮಂಡಳದಲ್ಲಿ ಮುಸ್ಲಿಂ ಪಕ್ಷದವರು ಸೇರಿದ್ದರಿಂದ ಉಂಟಾದ ಸಮಸ್ಯೆಗಳ ಸಂಬಂಧದಲ್ಲಿ ಅಕ್ಟೋಬರ ೨೩ಕ್ಕೆ ಕಾರ್ಯಸಮಿತಿಯಲ್ಲಿ ಚರ್ಚೆಯಾದ ನಂತರ ಬಂಗಾಲದ ಪೀಡಿತ ಭಾಗಕ್ಕೆ ಭೆಟ್ಟಿ ಕೊಡಬೇಕೆಂಬ ತಮ್ಮ ಮನೀಷೆಯನ್ನು ಅವರು ಮತ್ತೆ ಸಾರಿದರು.

'ನಾನಲ್ಲಿಗೆ ಹೋಗುವದರಿಂದ ನನ್ನ ಅತ್ಮವು ಸಮಾಧಾನ ಹೊಂದುವದು. ಕೆಲಮಟ್ಟಿಗೆ ಅದರ ಉಪಯೋಗವೂ ಆಗಬಹುದು' ಎಂದಂದರವರು.

'ಮುಸಲ್ಮಾನರು ನಿಮ್ಮ ಮಾತು ಕೇಳುವರೋ' ಎಂದು ಅವರಿಗೆ ಪ್ರಶ್ನಿಸಲಾಯಿತು.

'ನಾನರಿಯೆ' ಎಂದುತ್ತರಿಸಿದರು. "ಫಲ ಸಿಕ್ಕುವುದೆಂದು ನಾನಲ್ಲಿಗೆ ಹೋಗುವದಿಲ್ಲ ಆದರೆ ಫಲವನ್ನಪೇಕ್ಷಿಸಲು ನನಗೆ ಹಕ್ಕಿದೆ. ಕೇವಲ ಕರ್ತವ್ಯ ಬುದ್ಧಿಯಿಂದ ಯಾವನು ಹೋಗುವನೊ ಅವನು ತನ್ನ ಕಾರ್ಯದಲ್ಲಿ ಪರಮಾತ್ಮನು ಬಲವನ್ನು ದಯಪಾಲಿಸಲೆಂದಿಷ್ಟೇ ಬಯಸುವನು.

ಈ ಬಗೆಯ ದುರಂತಗಳು ಹಿಂದುಸ್ತಾನದಲ್ಲಿ ಎಂದು ಕೊನೆಗೊಳ್ಳುವವು ಎಂದು ಕೇಳಿದ್ದಕ್ಕೆ ಅವರು ಇಂತು ಉತ್ತರ ಕೊಟ್ಟರು.

### ನಡುಗಾಲ ಸರಕಾರದ ಪುನರ್ಘಟನೆ

"ಅವು ಕೊನೆಗೊಳ್ಳುವವೆಂದು ನಿಮ್ಮ ಮನವರಿಕೆಯಾಗಿರಬಹುದು. ಬ್ರಿಟಿಶರ ವರ್ಚಸ್ಸು ಮಾಯವಾದರೆ ಅವು ಬಹಳ ಬೇಗ ಕೊನೆಗೊಳ್ಳುವವು. ಬ್ರಿಟಿಶ್ ಪ್ರಭುತ್ವ ಇಲ್ಲಿರುವ ವರೆಗೆ ಎರಡೂ ಪಕ್ಷಗಳು ತಮ್ಮ ಸಹಾಯಕ್ಕೆ ಬ್ರಿಟಿಶ್ ಶಕ್ತಿಯನ್ನು ಅಪೇಕ್ಷಿಸುವವೆಂದು ನಾನು ವಿಷಾದದಿಂದ ಹೇಳಬಯಸುವೆ."

ಮಹಾತ್ಮಾ ಗಾಂಧಿಯವರು ನಡುಗಾಲ ಸರಕಾರದ ಕಾರ್ಯಕಲಾಪಗಳ ಬಗ್ಗೆ ಹೇಳುತ್ತ ಆ ಸರಕಾರದ ಮುಸ್ಲಿಂ ಲೀಗ ಮಂತ್ರಿಗಳಾಗಿ ಆರಿಸಲ್ಪಟ್ಟ ರಾಜಾ ಗಜನಫರ ಅಲ್ಲೀಖಾನರು ತೆಗೆದ ಪ್ರಕಟನೆಯ ಬಗ್ಗೆ ವಿಷಾದವನ್ನು ವ್ಯಕ್ತಪಡಿಸಿದರು. ಪಾಕಿಸ್ತಾನವನ್ನು ಹೋರಾಡುವದಕ್ಕಾಗಿ ಮುಸ್ಲಿಂ ಲೀಗ ನಡುಗಾಲ ಸರಕಾರದಲ್ಲಿ ಸೇರುತಿದೆಂಬ ರಾಜಾ ಗಜನಫರ ಅಲ್ಲೀಖಾನರ ಹೇಳಿಕೆಯ ಬಗ್ಗೆ ಅವರು ಹೀಗೆ ಹೇಳಿದರು.

"ಇದು ವಿಲಕ್ಷಣ ಮತ್ತು ಅಸಮಂಜಸನಿಲುಮೆ. ನಡುಗಾಲ ಸರಕಾರ ಕೇವಲ ಮಧ್ಯಂತರ ಅವಧಿಗಾಗಿ ಮಾತ್ರ ಇರುವದು ಮತ್ತು ಬಹು ಕಾಲ ಬಾಳದು. ದೇಶವನ್ನು ಎದುರಿಸುತ್ತಿರುವ ಉಪವಾಸ, ನಗ್ನತೆ ಬೇನೆ, ಅನುಚಿತ ಸಂಪರ್ಕ, ಲಂಚಗುಳಿತನ, ನಿರಕ್ಷರತೆ ಮೊದಲಾದ ಸಮಸ್ಯೆಗಳನ್ನು ಬಿಡಿಸಲು ಈ ನಡುಗಾಲ ಸರಕಾರ ಅಧಿಕಾರದಲ್ಲಿ ಬಂದಿದೆ. ಇವುಗಳಲ್ಲಿ ಯಾವದೊಂದೆ ಸಮಸ್ಯೆ ಹಿಂದುಸ್ತಾನದಲ್ಲಿಯ ಅತಿ ಬುದ್ಧಿವಂತರ ತಲೆಯನ್ನೂ ಕೆಡಿಸಬಲ್ಲದು. ಇವುಗಳಲ್ಲಿ ಹಿಂದೂ ಮುಸಲ್ಮಾನ ಪ್ರಶ್ನೆ ಉದ್ಭವಿಸುವದಿಲ್ಲ. ಹಿಂದು ಮುಸಲ್ಮಾನರಿಬ್ಬರೂ ಬತ್ತಲೆ ಇರುವರು. ಎರಡೂ ಜಾತಿಯವರು ಉಪವಾಸ ಬಳಲುತಿರುವರು. ನಿರಕ್ಷರತೆಯ ರಕ್ಕಸನನ್ನು ಹೊಡೆದಟ್ಟಲು ಮತ್ತು ಹಿಂದುಸ್ತಾನಕ್ಕೆ ಒಗ್ಗದ ಶಿಕ್ಷಣವನ್ನು ಹೊರದೂಡಲು ಹಿಂದು ಮುಸಲ್ಮಾನರಿಬ್ಬರೂ ಪ್ರಯತ್ನಿಸುವದುಂಟು.

"ಈ ನಡುಗಾಲ ಸರಕಾರ ಮತ್ತು ಘಟನಾ ಸಮಿತಿ ಸ್ಥಾಪಿಸಲಿರುವ ಸರಕಾರಗಳ ಮಧ್ಯಂತರ ಅವಧಿ ಬಹಳಿರುವದಿಲ್ಲ. ಘಟನಾ ಸಮಿತಿಯ ಕಾರ್ಯವನ್ನು ಮುಗಿಸಬೇಕೆಂದು ಹಿಂದು ಮುಸಲ್ಮಾನರು ಸನ್ನದ್ಧರಾದರೆ ಆ ಅವಧಿಯಿನ್ನೂ ಕಡಮೆಯಾಗಬಲ್ಲುದು.

"ಘಟನಾ ಸಮಿತಿಯು ಸರಕಾರದ ಘೋಷಣ ಪತ್ರಿಕೆಯನ್ವಯ ರಚಿತವಾಗಿದೆ. ಪಾಕಿಸ್ತಾನದ ವಿಚಾರವನ್ನು ಆ ಪತ್ರಿಕೆ ಹಿಂದೂಡಿಬಿಟ್ಟಿದೆ. 'ವರ್ಗೀಕರಣ'ದ ಮಾರ್ಗವನ್ನು ಅದು ಸೂಚಿಸಿದೆ. ಕಾಂಗ್ರೆಸು ಇದಕ್ಕೆ ಒಂದು ಬಗೆಯ ಅರ್ಥ ಹಚ್ಚಿದರೆ, ಮುಸ್ಲಿಂ ಲೀಗಿನವರು ಎರಡನೇ ರೀತಿಯಿಂದ ಅರ್ಥ ಹಚ್ಚುವರು ಮತ್ತು ಮಂತ್ರಿ ರಾಯಭಾರದವರು ಮೂರನೇ ಅರ್ಥವನ್ನು ಕಲ್ಪಿಸುವರು. ಯಾವ ಕಾಯದೆ ನಿರ್ಮಾಪಕನೂ ತನ್ನ ಕಾಯದೆಯ ಅರ್ಥವನ್ನು ತಾನೇ ಮಾಡಲಾರನು. ಯಾವದೊಂದು ಕಾಯದೆಯ ಅರ್ಥದ ಬಗ್ಗೆ ವಿವಾದ ಹುಟ್ಟಿದರೆ ಯೋಗ್ಯ ನ್ಯಾಯಾಲಯವೆ ಅದರ ಅರ್ಥವನ್ನು ಇತ್ಯರ್ಥಗೊಳಿಸಬಲ್ಲುದು."

"ಮುಸ್ಲಿಂ ಲೀಗಿನವರು ನ್ಯಾಯಾಲಯದ ಈ ಅರ್ಥವನ್ನು ಒಪ್ಪದಿದ್ದರೆ?

"ಅವರು ತಮ್ಮ ಅರ್ಥವನ್ನು ಎರಡನೆಯವರ ಮೇಲೆ ಹೇರಲಾರರು. ಅವರು ಹಾಗೆ ಮಾಡಬಯಸಿದರೆ ತಪ್ಪು ಮಾರ್ಗವನ್ನು ಹಿಡಿದಂತಾಗುವದು. ಹೊಡೆದಾಡುವದೇ ಇದರ ಪರಿಣಾಮವು. ನಾವೆಲ್ಲ ಪಶುಗಳಂತಿದ್ದು ಮತಭೇದವಾದಾಗ ಅನೇಕ ಸಲ ಹೊಡೆದಾಡಹತ್ತುವೆವು. ಆದರೂ ನಾವೆಲ್ಲರು ಸಭ್ಯಗೃಹಸ್ಥರು. ಅಮೇರಿಕೆ, ಯುರೋಪಿನಲ್ಲಿಯಾದರೂ ಹೀಗೆಯೆ ಇದೆ."

### ಮದ್ರಾಸ ಖಾದೀ ಯೋಜನೆ

ಕೈನೂಲು ಕೈಮಗ್ಗದ ಗಾಂಧೀ ಯೋಜನೆಯನ್ನು ಕಾರ್ಯಕಾರಿ ಮಾಡುವ ಉದ್ದೇಶದಿಂದ ಮದ್ರಾಸ ಮಂತ್ರಿಮಂಡಳದವರು ಪ್ರಾಂತದಲ್ಲಿ ಜವಳಿ ಗಿರಣಿ ಉದ್ಯೋಗ ಬೆಳೆಯದಂತೆ ನೋಡಿಕೊಳ್ಳಲು ನಿರ್ಧರಿಸಿರುವದರ ಬಗ್ಗೆ ನಿಮ್ಮ ಪ್ರತಿಕ್ರಿಯೆಯೇನು ಎಂದು ಕೇಳಿದ್ದಕ್ಕೆ ಮಹಾತ್ಮರು ಹೀಗೆ ಹೇಳಿದರು.

"ಅತ್ಯುತ್ತಮ ಸಂಗತಿಯಿದು. ತರ್ಕಶುದ್ಧವಾಗಿ ನೀವು ಅದನ್ನು ಮಾಡಬಯಸುತಿದ್ದರೆ, ಅದನ್ನು ಪರಿಪೂರ್ಣಗೊಳಿಸುವಂತೆ ನೀವು ನೋಡಿಕೊಳ್ಳತಕ್ಕದ್ದು."

ಈ ಪ್ರಾಂತದಲ್ಲಿ ನಡೆಯುತಿರುವ ಗಿರಣಿಗಳನ್ನೆಲ್ಲ ಮುಚ್ಚಿ ಬಿಟ್ಟ ಬಳಿಕವೆ 'ಇದು ಪರಿಪೂರ್ಣ ಸ್ಥಿತಿಗೆ ಮುಟ್ಟಿದಂತಾಗುವದೋ' ಎಂದು ಕೇಳಿದ್ದಕ್ಕೆ ಈ ಕಾರ್ಯಕ್ರಮವು ಪ್ರಗತಿ ಹೊಂದಿ ಕಾಲಾವಧಿಯಲ್ಲಿ ಗಿರಣಿಗಳಿಗೆ ಗಿರಾಕಿಗಳೇ ಇಲ್ಲದಂತಾದರೆ 'ಪರದೇಶಗಳಿಗೆ ಸರಕು ಕಳಿಸಬೇಕೆಂದು ಅವರು ಗೊತ್ತುಪಡಿಸದಿದ್ದರೆ' ಇಲ್ಲಿಂದ ಕಾಲ್ತೆಗೆಯಬೇಕಾಗುವದೆಂದು ಅವರು ಹೇಳಿದರು.

ನಾತಾಳ ಸಕ್ಕರೆ ಗಿರಣಿಯು ಹಿಂದೀ ಕೂಲಿಗಾರರನ್ನು ಕರೆತಂದು ಈ ಪ್ರತ್ಯೇಕೀಕರಣ ಸಮಸ್ಯೆಯನ್ನುಂಟು ಮಾಡಿತೆಂದು ಅವರು ಹೇಳಿದರು.

### ಬ್ರಿಟಿಶ್ ಅಧಿಕಾರಿಗಳ ಭವಿತವ್ಯ

ಹಿಂದುಸ್ತಾನ ಸರಕಾರದಲ್ಲಿರುವ ಇಂಗ್ಲಿಶ್ ಅಧಿಕಾರಿಗಳ ಭವಿತವ್ಯವೇನು ಎಂಬ ಪ್ರಶ್ನೆಗೆ ಗಾಂಧಿಜಿಯವರು ಹೀಗೆ ಹೇಳಿದರು.

"ಹಿಂದುಸ್ತಾನಕ್ಕೆ,ಹಿಂದೀ ಪರಂಪರೆಗೆ ಮತ್ತು ಪರಿಸ್ಥಿತಿಗೆ ನಿಷ್ಠರಾಗಿರುವವರಿಗೆಲ್ಲ ಹಿಂದುಸ್ತಾನ ಉಪಯುಕ್ತವಾಗಿದೆಂದು ನನಗನಿಸುತ್ತದೆ. ಅವನು ಲೋಭ-ಲಂಚಗಳಿಂದ ವಿಮುಕ್ತನಾಗಿರಬೇಕು. ಇಂಗ್ಲಂಡಕ್ಕೆ ದ್ರೋಹಿಯಾಗಿರಬೇಕೆಂದು ನಾನು ಹೇಳಬಯಸುವದಿಲ್ಲ. ಅದರ ಅರ್ಥ ಹಾಗಲ್ಲ. ಅವರು ಹಿಂದುಸ್ತಾನಕ್ಕೆ ದ್ರೋಹಿಯಾಗಿರಬಾರದು. ವಿಷಯಗಳಲ್ಲಿ ತಿಕ್ಕಾಟವೇಳಬಾರದು. ಆದರೆ ಇತಿಹಾಸದಲ್ಲಿ ಹಾಗೆ ಆಗಿದ್ದುಂಟು. ಹಿಂದುಸ್ತಾನವನ್ನು ಸುಲಿದು ತಮ್ಮ ತಾಯ್ನಾಡಿನ ಸೇವೆ ಮಾಡುವದಕ್ಕಾಗಿ ಅನೇಕರು ಇಲ್ಲಿಗೆ ಬಂದಿರುವರು. ಇದು ವಂಚನೆ, ಅಪ್ರಾಮಾಣಿಕತೆ. ಯಾವದೊಂದು ನೋಕರಿಯಲ್ಲಿ ಅಪ್ರಾಮಾಣಿಕತೆಗೆ ಅವಕಾಶವಿಲ್ಲ. ನೋಕರಿಯಲ್ಲಿ ಮತ್ತು ಹೊರಗೆ ಅಪ್ರಾಮಾಣಿಕರಾಗುಳಿಯಲಾರರು.

ಅಮೇರಿಕೆಗೆ ಏನಾದರೂ ಸಂದೇಶ ಕೊಡಬಯಸುವಿರಾ ಎಂದು ಕೇಳಿದ್ದಕ್ಕೆ ಅವರು ಹೀಗೆಂದರು.

### ಅಮೇರಿಕೆಗೆ ಸಂದೇಶ

"ರಕ್ಕಸನೆಂದು ಕರೆಸಿಕೊಳ್ಳುವ ಶ್ರೀಮಂತ ದೇವರನ್ನು ಸಿಂಹಾಸನದಿಂದ ತಳ್ಳಿ ಬಡದೇವರನ್ನು ಒಂದು ಮೂಲೆಯಲ್ಲಿ ಪ್ರತಿಷ್ಠಿತಗೊಳಿಸಿದರೆ ಅಮೇರಿಕೆಯ ಭವಿತವ್ಯ ಉಜ್ವಲವಾಗಿದೆಂದು ನನಗನಿಸುತ್ತದೆ. ಆದರೆ ಅದು ರಕ್ಕಸನನ್ನು ಅನುಸರಿಸುತ್ತ ಹೋದರೆ ಯಾರು ಎಷ್ಟೇ ವಿರುದ್ಧ ಹೇಳಿದರೂ ಅಮೇರಿಕೆಯ ಭವಿತವ್ಯ ವಿಷಾದಮಯವಾಗುವದೆಂದು ನಾನು ಹೇಳಬಯಸುವೆ. ರಕ್ಕಸನು ಕೊನೆಯ ವರೆಗೆ ನಮ್ಮ ಮಿತ್ರನಾಗಿ ಉಳಿದದ್ದಿಲ್ಲ. ಅವನು ಯಾವಾಗಲೂ ಅಪ್ರಾಮಾಣಿಕ ಗೆಳೆಯ.

ತಾವು ೧೨೫ ವರ್ಷ ಬಾಳುವುದಾಗಿ ಅನೇಕ ಸಲ ಹೇಳುತ್ತ ಬಂದ ೭೭ ವರ್ಷಗಳನ್ನು ಕಳೆದ ಮಹಾತ್ಮಾ ಗಾಂಧಿಯವರು ಇಂದು ತಮ್ಮ ಆ ವಿಶ್ವಾಸ ಅಸ್ಥಿರವಾಗಹತ್ತಿದೆ ಎಂದು ಹೇಳಿದರು—ಕೆಲವಾರಗಳ ಹಿಂದೆ ಗಾಂಧೀಜಿಯ ಜಯಂತ್ಯುತ್ಸವ ಸಮಾರಂಭದ ಕಾಲಕ್ಕೆ ಅವರ ಸಹಕಾರ್ಯಕರ್ತರು ಕೊಟ್ಟ ಬಹಳ ಹಣ್ಣುಗಳನ್ನು ತಿಂದುದಕ್ಕಾಗಿ ತಮ್ಮಲ್ಲಿ ಸ್ಥೈರ್ಯವಿಲ್ಲದಂತಾದುದು ಈ ಬಗೆಯ ಅನಿಶ್ಚಿತತೆಗೆ ಕಾರಣವೆಂದು ಅವರು ಹೇಳುತಿರುವರು. ತಾವು ಸಾಕಷ್ಟು ಸಶಕ್ತರಿರುವುದಾಗಿ ಅವರಿಗನಿಸಿದರೂ ೧೨೫ ವರ್ಷ ಬಾಳಬೇಕೆಂಬ ಗುರಿಯನ್ನು ಮುಟ್ಟುವ ಬಗ್ಗೆ ಅವರಲ್ಲಿ ಸಂದೇಹವುಂಟಾಗಿದೆ.

"ನನ್ನ ಆ ವಿಶ್ವಾಸ ಈಗ ಚಲವಾಗಹತ್ತಿದೆ. ಅದು ಅನ್ಯಾಯದ್ದಾಗಿದೆಂಬುದು ಇದಕ್ಕೆ ಕಾರಣವಲ್ಲ. ಆದರೆ ಆ ಬಯಕೆ ಸಫಲವಾಗಬೇಕಾದರೆ ನಿರ್ದಿಷ್ಟ ಕೆಲ ನಿಯಂತ್ರಣಗಳಿರುವವು. ಆ ನಿಯಂತ್ರಣಗಳನ್ನು ನೀವು ಈಡೇರಿಸದಿದ್ದರೆ ನಿಮ್ಮ ಬಯಕೆ ಸಫಲವಾಗಲಾರದು. ಸದ್ಯಕ್ಕೆ ನನ್ನಲ್ಲಿ ಅವಶ್ಯಕ ಸ್ಥೈರ್ಯವಿಲ್ಲದಂತಾಗಿದೆ. ಸ್ಥೈರ್ಯದ ಆ ಮಟ್ಟವನ್ನು ನಾನು ಮುಟ್ಟಿರುವದಿಲ್ಲ ಎಂದು ನನಗೆನಿಸುತ್ತದೆ. ಕೃತಕೋಪಾಯಗಳಿಂದ. ಔಷಧ ಸೇವನೆಯಿಂದ ಮತ್ತು ಅಂಥ ಇತರ ಉಪಚಾರಗಳಿಂದ ೧೨೫ ವರ್ಷ ಅಷ್ಟೇ ಏಕೆ ಒಂದು ವರ್ಷ ಕೂಡ ಬಾಳಬೇಕೆಂಬ ಮನೀಷೆ ನನಗಿಲ್ಲ. ಸದ್ಯದ ನನ್ನ ರೀತಿಯಲ್ಲಿಯೆ, ಸೇವೆಯ ನನ್ನ ಜೀವನವನ್ನು ನನಗೆ ಸಾಗಿಸಬೇಕಾಗಿದೆ."

"ಎಂಥ ಸಂದರ್ಭದಲ್ಲಿಯೂ ನೀವು ಸಮತೃಪ್ತಿಯವರಾದರೆ ಮಾತ್ರ ಅದು ಶಕ್ಯವಿದೆ. ಯಾವುದೂ ನಿಮ್ಮನ್ನು ವ್ಯಥೆಪಡಿಸಬಾರದು. ಯಾವುದೂ ನನ್ನನ್ನು ವ್ಯಥೆಪಡಿಸಲಾರದು. ಅಥವಾ ವ್ಯಥೆ ಪಡಿಸಿಲ್ಲ ಎಂದು ಹೇಳಲು ಇಂದು ನಾನು ಸಮರ್ಥನಾಗಿರುವದಿಲ್ಲ"

'ಕೆಲ ದಿನಗಳ ಹಿಂದೆ' ತಮಗೆ 'ಬಲಿಷ್ಠ ಅಘಾತ'ವಾಗುವ ವರೆಗೆ ೧೨೫ ವರ್ಷಗಳ ವರೆಗೆ ಶಾಂತ ರೀತಿಯಿಂದ ಬಾಳಬೇಕೆಂಬ ಬಯಕೆ ತಮಗೆಇತ್ತು ಎಂದುಅವರು ಹೇಳಿದರು. ಈವರ್ಷ ಹಿಂದು ಪದ್ಧತಿಯಂತೆ ಅವರ ಜಯಂತಿ ಈ ಸಲ ಅಕ್ಟೋಬರ ೨ ರ ಮೊದಲು ೧೦ ದಿನ ಬಂದಿತು. ಆ ಕಾಲಕ್ಕೆ ಅವರಿಗೆ ಈ ಅಘಾತವಾಯಿತು. ಆ ಸಮಾರಂಭದ ನಿಮಿತ್ತವಾಗಿ ಧ್ವಜವಂದನೆಯ ಕಾರ್ಯಕ್ರಮ ಏರ್ಪಡಿಸಲಾಗಿದ್ದಿತು. ಅಹಾರ ಮಂತ್ರಿಗಳಾದ ರಾಜೇಂದ್ರಪ್ರಸಾದರು ಅದರ ಅಧ್ಯಕ್ಷತೆ ವಹಿಸಿದ್ದರು. ಆ ಕಾಲಕ್ಕೆ ಹರಿಜನ ಮಕ್ಕಳಿಗೆ ಮತ್ತು ಶಿಬಿರದಲ್ಲಿಯ ಸ್ವಯಂಸೇವಕರಿಗೆ ಶೇಂಗಾ, ಒಣಗಿದ ದ್ರಾಕ್ಷ ಮೊದಲಾದವುಗಳನ್ನು ಕೊಡುವವರಿದ್ದರು.

"ಹುಚ್ಚನಂತೆ ನಾನು ಹುರಿದೆದ್ದೆನು" ಎಂದು ಮಹಾತ್ಮರು ನುಡಿದರು. ನನ್ನಲ್ಲಿ ತಾಳ್ಮೆಯಿಲ್ಲದಂತಾಯಿತು. ಇದನ್ನು ವರ್ಣಿಸಲು ನೀವು ಬೇಕಾದ ಅನ್ವಯ ಇಲ್ಲವೆ ವಿಶೇಷಣವನ್ನು ಪ್ರಯೋಗಿಸಬಲ್ಲಿರೆಂದೂ ಅವರು ಹೇಳಿದರು.

ಅಹಾರ ಮಂತ್ರಿಗಳ ಸಮ್ಮುಖದಲ್ಲಿ ಅನವಶ್ಯಕವಾಗಿ ಮಕ್ಕಳಿಗೆ ಮತ್ತು ಇತರರಿಗೆ ಅಹಾರ ಪದಾರ್ಥಗಳನ್ನು—ಇವು ಆ ಮಕ್ಕಳಿಗೆ ಅವಶ್ಯವಾಗಿರಲಿಲ್ಲ—ಕೊಡುವದೆಂದರೆ ಅವರ ಅಪಮಾನವೆಂದು ನಾನು ಭಾವಿಸುವೆ" ಎಂದು ಅವರು ನುಡಿದರು.

"ಆಗ ನನಗೆ ನನ್ನ ಅಪಯಶಸ್ಸಿನ ಗುಟ್ಟು ಗೊತ್ತಾಯಿತು ಈ ರೀತಿ ಆತ್ಮಸಂಯಮನವನ್ನು ಕಳೆದುಕೊಂಡದ್ದರಿಂದ ನನ್ನ ಅಯುಷ್ಯ ಕೆಲಮಟ್ಟಿಗೆ ಕಡಿಮೆಯಾಯಿತು. ನನ್ನಲ್ಲಿ ಸ್ಥೈರ್ಯ ಮತ್ತೆ ಬಂದದ್ದಾದರೆ ಮಾತ್ರ ಆ ಅಯುಷ್ಯವನ್ನು ಪುನಃ ವರ್ಧಿಸಿಕೊಳ್ಳಬಹುದು. ಹಾಗೆ ಹೇಳುವದು ನಮ್ಮ ರೀತಿಯಾಗಿದೆ.

"ಅಹಾರದ ಒಂದು ತುಣುಕನ್ನು ಕೂಡ ಮಿತವಾಗಿ ಉಪಯೋಗಿಸುವದು ಅವಶ್ಯವಾಗಿದೆ. ನಾವು ಹಾಗೆ ಮಾಡಿದ್ದಾದರೆ ಅಹಾರದ ಕೊರತೆಯಾಗದು" ಎಂಬ ಕಾರಣದಿಂದಲೆ ತಾವು ಇಷ್ಟೊಂದು ರೊಚ್ಚಿಗೆದ್ದದ್ದೆಂದು ಅವರು ನುಡಿದರು.

"ನಮ್ಮನ್ನಾಳುವವರಿಗೆ ತಮ್ಮ ಕರ್ತವ್ಯದ ಅರಿವಾದರೆ ಮತ್ತು ಕಳ್ಳಪೇಟೆ ಇಲ್ಲದಂತಾದರೆ ಜಗತ್ತಿನಲ್ಲಿಯ ಅಹಾರ ಕೊರತೆಯ ರಾಷ್ಟ್ರಗಳಲ್ಲಿ ಹಿಂದುಸ್ತಾನವೇ ಕೊನೆಯದಾಗುವದು"

# ವಾರದ ಪತ್ರ

## ಒತ್ತಾಯದ ಮದುವೆ ಮತ್ತು ಮತಾಂತರ

“ಅಪಹೃತರಾದವರ, ಒತ್ತಾಯದಿಂದ ಮತಾಂತರಿಸಲ್ಪಟ್ಟವರ, ತಮ್ಮ ಇಚ್ಛೆಯಿಲ್ಲದಿದ್ದರೂ ಒತ್ತಾಯಕ್ಕಾಗಿ ಮದುವೆ ಮಾಡಿಕೊಂಡವರ ಗತಿಯೇನು?” ಈ ಪ್ರಶ್ನೆಯು ಸಾವಿರಾರು ಜನರ ಮನಸ್ಸನ್ನು ಕದಡಿದಂತೆ ಮಹಾತ್ಮರ ಮನಸ್ಸನ್ನೂ ಕದಡಿದೆ. ಇದೇ ಅಕ್ಟೋಬರ ೨೦ ನೇ ತಾ॥ ಗೆ ರವಿವಾರ ದಿನ ಅಂದಿನ ೨೪ ತಾಸುಗಳಲ್ಲಿ ಈ ವಿಷಯದ ಬಗ್ಗೆ ಕೇಳಿದ ಪ್ರಶ್ನೆಗಳಿಗೆ ಮಹಾತ್ಮರು ಸಾಯಂ ಪ್ರಾರ್ಥನಾ ಸಭೆಯಲ್ಲಿ ಉತ್ತರಿಸುತ್ತ ಒತ್ತಾಯದ ಮತಾಂತರವು ಮತಾಂತರವೇ ಅಲ್ಲ, ಓಡಿಸಿಕೊಂಡು ಹೋದ ಮಾತ್ರಕ್ಕೆ ಹೆಣ್ಣುಮಗಳು ಪುನಃ ತನ್ನ ಮನೆಯನ್ನು ಸೇರಲು ಆತಂಕವಿರಬಾರದು ಎಂದು ನಾನು ಖಂಡಿತವಾಗಿ ಹೇಳುತ್ತೇನೆಂದರು. ಇಂಥ ಸಂದರ್ಭದಲ್ಲಿ ಶುದ್ಧೀಕರಣವಾಗಲಿ ಪ್ರಾಯಶ್ಚಿತ್ತವಾಗಲಿ ಅವಶ್ಯವಿಲ್ಲೆಂದು ಹೇಳಿದರು. ಇಂಥ ಜನರಿಗೆ ಪ್ರಾಯಶ್ಚಿತ್ತ ಹೇಳಿದರೆ ಹಿಂದೂ ಸಮಾಜವು ತಪ್ಪೀತು. ಆ ಜನರು ತಪ್ಪು ಮಾಡಿಲ್ಲ. ಮಹಾತ್ಮರು ಮುಸ್ಲಿಂ ಮತ್ತು ಕ್ರಿಶ್ಚನರ ನಡುವೆ ಅನೇಕ ವರ್ಷ ವಾಸವಾಗಿದ್ದಾರೆ. ಧರ್ಮದಲ್ಲಿ ಒತ್ತಾಯವಿರಬಾರದೆಂದು ಅವರೆಲ್ಲರೂ ಗಾಂಧೀಜಿಯವರಿಗೆ ಆಶ್ವಾಸನ ಕೊಟ್ಟಿದ್ದಾರೆ. ದೇವರು ಒಬ್ಬನೇ ಇದ್ದಾನೆ ಮತ್ತು ಮಹಮ್ಮದನು ಅವನ ದೂತರಲ್ಲೊಬ್ಬನು ಎಂದು ನಂಬುವ ತಾವೂ ತಮ್ಮ ಶ್ರೋತೃವೃಂದವೂ ಒಂದು ರೀತಿಯಿಂದ ಮುಸ್ಲಿಂರೆ ಆದಂತಾಯಿತು. ಆದರೆ ತಮ್ಮನ್ನಾಗಲಿ ಈ ಶ್ರೋತೃಗಳಲ್ಲಿ ಯಾರನ್ನಾಗಲಿ ‘ಕಲಮಾ’ ಅನ್ನಬೇಕೆಂದು ಒತ್ತಾಯಪಡಿಸಿದರೆ ತಾವೆಲ್ಲ ಧೈರ್ಯದಿಂದ ನಿರಾಕರಿಸಿ ಅದರ ಪರಿಣಾಮಗಳನ್ನು ಅನುಭೋಗಿಸಲು ಸಿದ್ಧರಾಗುವೆವು.

ಪ್ರಕ್ಷುಬ್ಧವಾದ ಪೂರ್ವ ಬಂಗಾಲದಲ್ಲಿಯ ದುರ್ಘಟನೆಗಳನ್ನು ತಡೆಯಲು ಎಲ್ಲ ಒಳ್ಳೆಯ ಮುಸ್ಲಿಂರು ಪ್ರಯತ್ನಿಸುವರೆಂದು ತಮ್ಮ ಆಶೆಯಾಗಿದೆಂದೂ ಮಹಾತ್ಮರು ಹೇಳಿದರು.

## ಉನ್ಮಾದ ಪ್ರದರ್ಶನ

ಭಾವನೆಗಳ ಉದ್ರೇಕವಾದಾಗ ಸಂಭ್ರಮ ಸ್ವಾಭಾವಿಕ. ನಮ್ಮ ರೋಷವೆಷ್ಟೇ ನ್ಯಾಯವಾದುದಿದ್ದರೂ ಅದು ನಮ್ಮ ತರ್ಕವನ್ನೂ ವಿವೇಕವನ್ನೂ ಮೆಟ್ಟಿ ಪರಸ್ಪರ ವಿರುದ್ಧಮಾರ್ಗದಲ್ಲಿ ನಮ್ಮಲ್ಲಿ ಒಯ್ಯದಿರಲಿ. ಕಳೆದ ಗುರುವಾರ ಸಾಯಂಪ್ರಾರ್ಥನೆಯ ಸ್ವಲ್ಪಹೊತ್ತು ಮುಂಚಿತವಾಗಿ ಯುವಕರ ತಂಡವೊಂದು ಭಿತ್ತಿಪತ್ರಗಳನ್ನು ಪ್ರದರ್ಶಿಸುತ್ತ ಕೂಗಾಡುತ್ತ ಪೂರ್ವಬಂಗಾಲದ ಸಂಕಟಪರಿಹಾರವಾಗಬೇಕು ಎಂದು ಕೂಗಾಡುತ್ತ ಭಂಗಿವಸತಿಯಲ್ಲಿಯ ಪ್ರಾರ್ಥನಾ ಬಯಲನ್ನು ಆಕ್ರಮಿಸಿತು. ಮಹಾತ್ಮರ ಆಶ್ರಮದಲ್ಲಿ ಆಗ ಸಭೆ ಸೇರಿದ್ದ ಕಾಂಗ್ರೆಸ ಕಾರ್ಯಸಮಿತಿಯ ಸದಸ್ಯರನ್ನು ತಮ್ಮ ಕೂಗು ಮುಟ್ಟಲೆಂಬುದೇ ಅವರ ಇಚ್ಛೆಯಾಗಿತ್ತು. ತಮಗಿದು ಆಗಲೇ ಗೊತ್ತಾಗಿದೆಂದು ಮಹಾತ್ಮರು ಹೇಳಿದರು. ತಮ್ಮ ಸ್ಥಾನವು ಬಂಗಾಲದಲ್ಲಿದೆಂಬುದು ತಮಗೆ ಗೊತ್ತಿದೆ. ಆಸ್ತಿಕರಾದ ಸ್ತ್ರೀಪುರುಷರೆಲ್ಲರ ಅಂತಃಕರಣವು ಬಂಗಾಲದ ಘಟನೆಗಳಿಂದ ಕರಗಿ ನೀರಾಗಿವೆಂದು ಖಂಡಿತವಾಗಿ ಹೇಳಬಲ್ಲೆವೆಂದರು. ಪ್ರಾರ್ಥನಾ ಸಮಯಕ್ಕೆ ಗೊಂದಲವೆಬ್ಬಿಸಿದ ಅವರನ್ನು ಬಯ್ದು ಶಾಂತರೀತಿಯಿಂದ ಪ್ರಾರ್ಥನೆಯಲ್ಲಿ ಭಾಗವಹಿಸುವಂತೆ ಹೇಳಿದರು.

ತಮ್ಮ ಮನೆ ಉರಿಯುತ್ತಿರುವಾಗ ತಾವು ಪ್ರಾರ್ಥನೆ ಮಾಡಲಾರೆವೆಂದು ಯಾರೋ ಕೂಗಿದರು. ಮಹಾತ್ಮರು ಆ ವಿಷಯದ ಬಗ್ಗೆ ಅಂದು ಮಾತಾಡಿದರು.

ನಿತ್ಯದ ಪ್ರಾರ್ಥನೆ ನಡೆಯಲಿಲ್ಲ. ದಿನದಂತೆ ಪ್ರಾರ್ಥನೆ ನಡೆಸುವದಕ್ಕಾಗಿ ತಮ್ಮೆಲ್ಲರ ಮನಸ್ಸು ಅಷ್ಟೊಂದು ತಾಳ್ಮೆಯಿಂದಿಲ್ಲವೆಂದು ಮಹಾತ್ಮರು ಹೇಳಿದರು. ರಾಮಧುನ್ ಭಜನೆ ನಡೆದು ನೆರೆದಿದ್ದ ಜನಸ್ತೋಮವೆಲ್ಲ ಶಾಂತವಾಯಿತು. ನಿತ್ಯದ ಪ್ರಾರ್ಥನೆಯನ್ನು ಇಂದು ಬಿಡಬೇಕಾಗಿದ್ದರೂ ಅದು ತಮ್ಮ ಹೃದಯದಲ್ಲಿರುವದಾಗಿಯೂ ಅದು ದೇವರನ್ನು ಮುಟ್ಟುವ ನಂಬಿಕೆ ತಮಗಿರುವದಾಗಿಯೂ ಮಹಾತ್ಮರು ಹೇಳಿದರು.

ಮನೆ ಉರಿಯುತಿದೆ ಎಂದು ಹೇಳಿದ ತರುಣನ ಉತ್ಪ್ರೇಕ್ಷೆಯನ್ನೇ ಎತ್ತಿಕೊಂಡು ಮನೆಯು ಉರಿಯುತ್ತಿರುವಾಗ ಅದರ ಒಡೆಯನಾಗಲಿ ಅವನ ಸೇವಕನಾಗಲಿ ಆ ಬೆಂಕಿಯನ್ನು ನಂದಿಸಬೇಕು. ಅದೇ ಅವರ ಕರ್ತವ್ಯ. ಕಂಗೆಟ್ಟು ಹೋದರೆ ಪ್ರಯೋಜನವೇನು? ತನ್ನ ರಾಜಧಾನಿಯು ಉರಿಯುತ್ತಿದೆ ಎಂಬ ಸುದ್ದಿಯನ್ನು ಕೇಳಿಯೂ ಜನಕರಾಜನು ಶಾಂತಚಿತ್ತನಾಗಿದ್ದನು ಎಂಬ ಕಥೆಯನ್ನು ಮಹಾತ್ಮರು ಉಲ್ಲೇಖಿಸಿದರು. ಯಾಕಂದರೆ ಜನಕರಾಜನು ಆ ದುರ್ಘಟನೆಗೆ ಮೊದಲೂ ನಂತರವೂ ತನಗೆ ಸಾಧ್ಯವಿದ್ದ ಉಪಾಯಗಳನ್ನೆಲ್ಲ ಕೈಕೊಂಡಿದ್ದರಿಂದ ಅವನು ದೇವರಲ್ಲಿಯ ತನ್ನ ವಿಶ್ವಾಸವನ್ನು ನಂಬಿ ಕೂತಿದ್ದನು. ಆದರೆ ಅವನೂ ಬೆಂಕಿಯನ್ನು ನಂದಿಸಲು ಓಡಿಹೋಗಿದ್ದರೆ ಅಗ್ನಿನಾರಾಯಣನ ಕೆಲಸಕ್ಕೆ ಸಹಾಯಕನಾಗುತ್ತಿದ್ದನು. ಬಂಗಾಲದಲ್ಲಿ ಹೆಣ್ಣುಮಕ್ಕಳು ಸಂಕಟಕ್ಕೀಡಾದ್ದನ್ನು ಕೇಳಿ ವ್ಯಥೆಯಾಗುತ್ತದೆಂದರು ಗಾಂಧೀಜಿ. ಆದರೆ ಇಲ್ಲಿಯ ಶ್ರೋತೃವರ್ಗದಲ್ಲಿಯ ಹೆಣ್ಣುಮಕ್ಕಳೊಡನೆಯೆ ಯೋಗ್ಯವಾಗಿ ನಡೆದುಕೊಳ್ಳಲಾಗದಷ್ಟು ನಮ್ಮ ಬುದ್ಧಿ ಕಳೆದುಕೊಂಡಿದ್ದೇವೆ. ಅವರನ್ನು ಈ ಪ್ರಾರ್ಥನಾ ಬಯಲಿನಿಂದ ಓಡಿಸಿಬಿಟ್ಟಿದ್ದೇವೆ. ಸ್ತ್ರೀಯರು ಕಾಲಿತುಕೊಳ್ಳುವ ನಿತ್ಯದ ಸ್ಥಳವನ್ನು ಈ ತರುಣರು ಆಕ್ರಮಿಸಿದ್ದರು. ಬಂಗಾಲದಲ್ಲಿ ನಡೆದ ಸ್ತ್ರೀತ್ವದ ಅವಮಾನದ ಬಗ್ಗೆ ತಮ್ಮ ಸಹಾನುಭೂತಿಯನ್ನು ಈ ರೀತಿ ವ್ಯಕ್ತಪಡಿಸುವದು ವಿಚಿತ್ರ. ಈ ಕೃತಿಯ ಅಸಮರ್ಪಕತೆಯನ್ನು ಅರಿತುಕೊಳ್ಳುವಿರೆಂದು ಹಾರೈಸುತ್ತೇನೆಂದು ಮಹಾತ್ಮರು ನುಡಿದರು.

ನಮ್ಮ ಮಹಿಳೆಯರನ್ನು ಸುಲಭವಾಗಿ ಓಡಿಸಲಾಗಿದೆ. ಜಗತ್ತಿನಲ್ಲೆಲ್ಲ ಸುಮಾರಾಗಿ ಹೀಗೇ ಇದೆ. ನಮ್ಮ ಸ್ತ್ರೀಯರು ಧೈರ್ಯಶಾಲಿನಿಯರಾಗಬೇಕೆಂದು ಮಹಾತ್ಮರು ಹೇಳಿದರು. ಅವಮಾನಿತರಾಗುವದಕ್ಕಿಂತ ಆತ್ಮಹತ್ಯ ಮಾಡಿಕೊಳ್ಳಬೇಕು ಎಂಬ ಮಹಾತ್ಮರ ಉಪದೇಶವನ್ನು ತಪ್ಪಾಗಿ ಭಾವಿಸಲಾಗಿದೆ. ಆತ್ಮರಕ್ಷಣೆಗಾಗಿ ಅವರು ಬೇಕಾದರೆ ಕಠಾರಿಯನ್ನಿಟ್ಟುಕೊಳ್ಳಬಹುದು. ಆದರೆ ಸಂಕಟ ಪರಂಪರೆಯಲ್ಲಿ ಈ ಕಠಾರಿಯು ಉಪಯೋಗವಾಗಲಾರದು. ಅಪಮಾನಕ್ಕೆ ಗುರಿಯಾಗುವದಕ್ಕಿಂತ ವಿಷತಿಂದು ಸತ್ತುಬಿಡಲು ಮಹಾತ್ಮರು ಅವರಿಗೆ ಉಪದೇಶಿಸಿದ್ದಾರೆ. ಸಿದ್ಧತೆಯಲ್ಲಿಯೆ ಅವರ ಶೌರ್ಯ ಕಂಡುಬರಬೇಕು. ಸಾವಿಗಂಜದ ಸ್ತ್ರೀಯನ್ನು ಯಾರೂ ಅಪಮಾನಿಸರು. ಆತ್ಮರಕ್ಷಣೆಗಾಗಿ ಅವರಿಗೆ ಎರಡು ದಾರಿಗಳಿವೆ— ಹೆರವರನ್ನು ಕೊಂದು ಸಾಯುವದು ಇಲ್ಲವೆ ಯಾರನ್ನೂ ಕೊಲ್ಲದೆ ಸಾಯುವದು. ತಾವು ಎರಡನೆಯದನ್ನೇ ಕಲಿಸಲಿಚ್ಛಿಸುವದಾಗಿ ಮಹಾತ್ಮರು ಹೇಳಿದರು. ನಿರ್ಭೀತರಾಗಿರಬೇಕೆಂಬುದೆ ಅವರ ಇಚ್ಛೆ- ಹೇಡಿತನದಂಥ ಪಾಪವಿಲ್ಲ.

ಹಿಂಸಾವಲಂಬಿಗಳಿಗೂ ನೈತಿಕ ಕಟ್ಟಳೆ ಇದೆ. ಪೂರ್ವ ಬಂಗಾಲದಲ್ಲಿ ನಡೆದ ಅನನ್ವಿತ ಕೃತಿಗಳನ್ನು ಅನುಕರಿಸದಿರಿ. ಮೌಲಾನಾ ಸಾಹೇಬರೂ ಅ. ಭಾ. ಮಜ್ಲಿಸ ಅಹರಾರದ ಹಿಂದಿನ ಅಧ್ಯಕ್ಷರೂ ಹೊರಡಿಸಿದ ಪ್ರಕಟನೆಗಳನ್ನು ನೀವು ನೋಡಿರಬಹುದು. ಇಸ್ಲಾಂ ಧರ್ಮವು ಒತ್ತಾಯದ ಮತಾಂತರಗಳನ್ನೂ ಅಪಹರಣಗಳನ್ನೂ ಸ್ತ್ರೀಯರ ಅಪಮಾನವನ್ನೂ ಸಹಿಸುವದಿಲ್ಲೆಂದು ಅವರು ಹೇಳಿದ್ದಾರೆ.

## ‘ಫಕೀರಿ’ಯ ಬಗ್ಗೆ ಉಪದೇಶ

ಹಿರಿಯರಾದ ಠಕ್ಕರಬಾಪ್ಪಾ ಮತ್ತು ಮುಂಬಯಿಯ ಮುಖ್ಯಮಂತ್ರಿ ಶ್ರೀ ಬಾಳಾಸಾಹೇಬ ಖೇರರಲ್ಲಿ ಸಾಮ್ಯ ಬಹಳವಾಗಿದೆ. ಇವರಿಬ್ಬರೂ ಹರಿಜನ, ಭಿಲ್ಲ, ಆದಿವಾಸಿಗಳ ಉದ್ಧಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ. ಶ್ರೀ ಬಾಳಾಸಾಹೇಬ ಖೇರರು ತಮ್ಮ ವೃತ್ತಿಯನ್ನು ನಡೆಸುತ್ತಿದ್ದಾಗಲೂ ಮುಂಬಯಿ ಉಪನಗರಗಳಲ್ಲಿಯ ತೊಗಲು ಹದ ಮಾಡುವ ಕೆಲಸಗಾರರಿಗೆ ನೆರವಾಗುತ್ತಿದ್ದರೆಂಬುದು ಹೆಚ್ಚು ಜನರಿಗೆ ತಿಳಿದಿರಲಿಕ್ಕಿಲ್ಲ. ಮುಂಬಯಿಯ ಆದಿವಾಸಿ ಸೇವಾ ಮಂಡಳದ ಚಟುವಟಿಕೆಗಳಲ್ಲಿಯೂ ಅವರು ಭಾಗವಹಿಸುತ್ತಿದ್ದರು. ಇವರಿಬ್ಬರೂ ಮಹಾತ್ಮರ ಪ್ರಾರ್ಥನಾ ಸಭೆಗೆ ಆಗಮಿಸಿ ಮಹಾತ್ಮರ ಇಚ್ಛೆಯಂತೆ ಪ್ರಾರ್ಥನೆಯ ನಂತರ ಪದಗಳನ್ನು ಹಾಡಿದರು. ನಿತ್ಯಯೌವನದ ರಹಸ್ಯವನ್ನು ಕದ್ದಂತಿರುವ ಮತ್ತು ತಮ್ಮ ವಯಸ್ಸು ತಮ್ಮ ನಿರ್ಮಲ ಆತ್ಮಭಾವವನ್ನು ಹರಿಗಡಿಸಗೊಡದಂತಿದ್ದ ಠಕ್ಕರಬಾಪ್ಪಾರು, “ಫಕೀರನಾಗಬೇಕೆಂದು ಹಾರೈಸುತ್ತಿದೆ ನನ್ನ ಮನಸು” ಎಂಬ ಗೀತವನ್ನು ಹಾಡಿದರು. ಮಹಾತ್ಮರು ಇದೇ ವಿಷಯವನ್ನೆತ್ತಿಕೊಂಡು ತಾವು ಈ ಮೊದಲಿನ ಎರಡು ದಿನ ಹೇಳುತ್ತಿರುವದನ್ನು ಅನುಸರಿಸಬೇಕಾದರೆ ಅಪಮಾನಕ್ಕಿಂತ ಮರಣವನ್ನು ಅಪ್ಪಿಕೊಳ್ಳುವದಾದರೆ ನಮ್ಮೆಲ್ಲರಲ್ಲಿ ‘ಫಕೀರ’ನ ಹೃದಯವಿರಬೇಕು. ಫಕೀರನೆಂದರೆ ಭಿಕ್ಷಾಪಾತ್ರೆಯನ್ನು ಹಿಡಿದು ತಿರುಗುವ ಹಿಂದಿನ ತಿರುಕನಲ್ಲ. ಆಗ ಸಮಾಜದಲ್ಲಿ ಬಡವ-ಬಲ್ಲಿದರಿದ್ದರು ಆದ್ದರಿಂದ ತಿರುಕರಿಗೆ ಅಂದು ಅವಕಾಶವಿದ್ದಿತು. ಸಮಾಜದ ವಿಚಾರದಲ್ಲಿ ಪ್ರಗತಿ ಕಂಡುಬಂದರೂ ರೂಢಿಯು ಮಾತ್ರ ಅದನ್ನನುಸರಿಸಿಲ್ಲ. ಬಡವ-ಬಲ್ಲಿದ, ಕರಿಯ-ಬಿಳಿಯ, ದೇಶ-ವಿದೇಶಗಳ ಭೇದಭಾವವಿಲ್ಲದ ಹೊಸ ಸಮಾಜವಿನ್ನು ನಿರ್ಮಾಣವಾಗಲಿದೆ. ಆ ಸಮಾಜಕ್ಕೆ ಆತ್ಮಶುದ್ಧಿಯು ಅಗತ್ಯವಿದೆ. ಠಕ್ಕರ ಬಾಪ್ಪಾರು ಹರಿಜನ, ಭಿಲ್ಲ ಮುಂತಾದ ಪತಿತರಿಗಾಗಿ ತಮ್ಮ ಜೀವನವನ್ನು ಮೀಸಲಾಗಿಟ್ಟ ಫಕೀರರಾಗಿದ್ದಾರೆ. ಈ ಭಾವವನ್ನು ಎಲ್ಲರೂ ಅಳವಡಿಸಿಕೊಂಡರೆ ಅಪಮಾನಕ್ಕೀಡಾಗುವ ಅಪರಾಧಕ್ಕೆ ಗುರಿಯಾಗಲಾರರು. ಸ್ತ್ರೀಯರ ಮಾನಭಂಗವನ್ನಷ್ಟೇ ನಾನು ಗಮನಿಸುವೆನೆಂದಲ್ಲ. ಕಳ್ಳಪೇಟೆ ನಡೆಸುವದೂ ಬಡವರನ್ನು ವಂಚಿಸುವದೂ ಅಪಮಾನ. ಆದಕ್ಕಿಂತ ಆತ್ಮಹತ್ಯ ಮಾಡಿಕೊಳ್ಳಬೇಕೆಂದು ನಾನು ಹೇಳುತ್ತೇನೆಂದರು ಗಾಂಧೀಜಿ. ಇಂಥ ಮಾತನ್ನಾಡುವದರಿಂದ ಕೆಲವರನ್ನು ಹೆದರಿಸಿ ಬಿಡುತ್ತೇನೆಂಬುದು ನನಗೆ ಗೊತ್ತಿದೆಂದರು. ಆದರೆ ತಾವು ಖಂಡಿತವಾಗಿ ನಂಬಿದ್ದನ್ನು ಅವರಿಂದ ಬಚ್ಚಿಟ್ಟರೆ ತಪ್ಪೆಸಗಿದ ಅಪರಾಧಕ್ಕೆ ಗುರಿಯಾಗಬೇಕಾಗುವದು. ಠಕ್ಕರ ಬಾಪ್ಪಾರು ತಮ್ಮ ಹಾಡಿನಲ್ಲಿ ವ್ಯಕ್ತಪಡಿಸಿದ ಪಾವಿತ್ರ್ಯದ ಅವತಾರವಾಗಿದ್ದರೆ ಎಲ್ಲರಲ್ಲಿಯೂ ಈ ವಿಧದ ಪಾವಿತ್ರ್ಯ, ನೈತಿಕ ಬಲವಿಲ್ಲದಿದ್ದರೆ ತಮ್ಮ ಗೌರವರಕ್ಷಣೆ ಮಾಡಿಕೊಳ್ಳುವದು ಕಠಿಣವಾದೀತು.

ಮರುದಿನ ಸಂಜೆಗೆ ಶ್ರೀ ಬಾಳಾಸಾಹೇಬ ಖೇರರು ಹಾಡಿದ ತುಕಾರಾಮರ ಅಭಂಗವೂ ಅಷ್ಟೆ ವೈಶಿಷ್ಟ್ಯಪೂರ್ಣವಾಗಿತ್ತು. ಕೆಟ್ಟ ವಿಚಾರಗಳಿಗೆ ಕಾರಣವಾಗುವ ದೃಷ್ಟಿಯನ್ನು ಕೊಡುವದಕ್ಕಿಂತ ನನ್ನನ್ನು ಕುರುಡನನ್ನಾಗಿಸು ಎಂದು ಭಕ್ತನು ಇದರಲ್ಲಿ ದೇವರನ್ನು ಬೇಡಿಕೊಂಡಿದ್ದಾನೆ. ಕೆಟ್ಟಮಾತುಗಳನ್ನು ಕೇಳುವದಕ್ಕಿಂತ ಕಿವುಡನಾಗಬೇಕು ಎನ್ನುತ್ತಾನೆ. ದೇವರಿಗಾಗಿ ತನ್ನ ಮನಸು ಹಾತೊರೆಯುತ್ತದೆಂದು ಕೊನೆಗೆ ಹೇಳಿದ್ದಾನೆ.

## ಅಂಧಕಾರದ ದೀಪಾವಳಿ

ದುಃಖದಲ್ಲಿದ್ದ ಜನರ ದೀಪಾವಳಿ ಬಂದಿದೆ. ಕೊಲೆ, ಸುಲಿಗೆ, ಕೊಳ್ಳೆಯಿಡುವದು ಮುಂತಾದ ಅಪಕೃತ್ಯಗಳಿಗೆ ಗುರಿಯಾದ ಬಂಗಾಲದ ಸಾವಿರಾರು ಮನೆಗಳಲ್ಲಿ ಕತ್ತಲೆ ಇಡಗಿದೆ. ಸಂಹಾರವು ಮಾನವನ ಎಲ್ಲೆಯನ್ನು ಮೀರಿ ನಡೆದಿದೆ. ಧರ್ಮದ ಹೆಸರಿನಲ್ಲಿ ನಡೆದಿರುವ ಈ ಕಾಯಕಗಳನ್ನು ಕಂಡು ನಾಚಿಕೆಯಿಂದ ತಲೆಬಾಗಿಸಬೇಕಾಗಿದೆಯಲ್ಲದೆ ಮಾನವ ಸ್ವಭಾವದಲ್ಲಿಯ ವಿಶ್ವಾಸವೇ ಹಾರಿಹೋಗಿದೆ. ಇಡೀ ದೇಶದ ವಾತಾವರಣವೆಲ್ಲ ದುಃಖ, ಆಕ್ರೋಶ, ವ್ಯಥೆಗಳಿಂದ ತುಂಬಿರುವಾಗ ಸಂಭ್ರಮದ ದೀಪೋತ್ಸವವೆಂತು ನಡೆಯಬಲ್ಲದು? ಬರಗಾಲ ನಗ್ನತೆಗಳು ತಾನೇ ತಾನಾಗಿ ತಾಂಡವವಾಡುತ್ತಿರುವಾಗ ಉತ್ಸವವೆಂತು ಸಾಧ್ಯವೆಂದು ಮಹಾತ್ಮರು ಸೋಮವಾರ ದಿನ ತಮ್ಮ ಬರೆಹದ ಸಂದೇಶದಲ್ಲಿ ಹೇಳಿದರು. ಇಷ್ಟೆಲ್ಲ ಅಲ್ಲದೆ ಅವರು ತಂತಮ್ಮಲ್ಲಿ ಕಡಿದಾಡುತ್ತಿದ್ದಾರೆ. ಈ ವಿಷಯದ ಬಗ್ಗೆ ಮಹಾತ್ಮರು ಸಾಕಷ್ಟು ಬರೆದಿದ್ದಾರೆ, ಹೇಳಿದ್ದಾರೆ. ಆದರೂ ಈಗಿನ ದಿನಗಳಲ್ಲಿ ಪವಿತ್ರರಾದವರು ಇನ್ನೂ ಪವಿತ್ರರಾಗಬೇಕು, ಪಾಪಿಗಳು ತಮ್ಮ ಪಾಪವನ್ನು ತೊಳೆದುಕೊಳ್ಳಬೇಕು ಎಂದು ಪುನಃ ಹೇಳದಿರಲಾರೆ ಎಂದು ಮಹಾತ್ಮರು ಸಾರಿದರು. ಎಲ್ಲರೂ ಆದಷ್ಟು ಹೆಚ್ಚು ಅನ್ನವನ್ನು ಉಳಿಸಬೇಕು. ಹೆಚ್ಚು ಬಟ್ಟೆಯನ್ನು ಉತ್ಪಾದಿಸುವದಕ್ಕಾಗಿ ಹೆಚ್ಚೆಚ್ಚು ನೂಲಬೇಕು. ಆಹಾರವನ್ನು ಉಳಿಸುವದೆಂದರೆ ಅಷ್ಟನ್ನು ಉತ್ಪಾದಿಸಿದಂತೆಯೆ. ನೂಲುವದೆಂದರೆ ಭಾರತದ ನಗ್ನತೆಯನ್ನು ಕಡಿಮೆ ಮಾಡಲು ಸಹಾಯ ಮಾಡಿದಂತೆ. ಸತ್ಯವಂತನು ಜಗತ್ತನ್ನು ಒಂದು ಹೆಜ್ಜೆ ಮುಂದೊಯ್ಯುತ್ತಾನೆ. ನಮ್ಮ ಸರ್ವ ಸಾಮರ್ಥ್ಯವೆಲ್ಲ ಈ ವಿಷಯಗಳಿಗಾಗಿ ವಿನಿಯೋಗಿಸಲ್ಪಡಲಿ ಎಂದು ಗಾಂಧೀಜಿ ಮುಗಿಸಿದರು. “ಇಂದಿನ ದಿನಗಳು ಉತ್ಸವದ ಇಲ್ಲವೆ ಸಂಭ್ರಮದ ದಿನಗಳಲ್ಲವೆಂಬುದನ್ನು ಖಂಡಿತವಾಗಿ ತಿಳಿದುಕೊಳ್ಳಿರಿ.”

## ಹೊಸ ವರುಷದ ಸಂದೇಶ

ಮುಂದೆ ಶುಕ್ರವಾರ ಮಹಾತ್ಮರು ಹೊಸ ವರ್ಷದ ಸಂದೇಶ ಬೀರಿದರು. “ಭಾರತವು ಗಂಡಾಂತರದ ಪರಿಸ್ಥಿತಿಯಲ್ಲಿದೆ. ಹಾಗೆ ನೋಡಿದರೆ ಇಡೀ ಜಗತ್ತೇ ಗಂಡಾಂತರದಲ್ಲಿರುವಾಗ ಭಾರತವೆಂತು ಅಪವಾದವಾಗಬಲ್ಲುದು” ಎಂದರು.

“ಈ ಸಂದರ್ಭದಲ್ಲಿ ನಮಗೆ ಬೇಕಾದ ಗುಣವಾವುದು?” ಎಂದು ಕೇಳಿದರು. ಮಾನವನ ಆತ್ಮಿಕ ನಡೆವಳಿಕೆಗೆ ಅಗತ್ಯವಾದುದು ನಿರ್ಭೀತಿಯೆಂದು ಗೀತೆಯು ಹೇಳುತ್ತಿದೆ. ಹೊಸ ವರ್ಷದ ಹೊಸದಿನದಂದು ಜನರು ಕೆಲ ಒಳ್ಳೆಯ ನಿರ್ಧಾರ ಮಾಡುತ್ತಾರೆ. ಅಂಜಿಕೆಯನ್ನೆಲ್ಲ ಬಿಸಾಡಿ ನಿರ್ಭೀತರಾಗಬೇಕೆಂಬ ನಿರ್ಧಾರ ಮಾಡಿರೆಂದು ನಾನು ಕೇಳಿಕೊಳ್ಳುತ್ತೇನೆ. ಹೆದರಿಕೆ ಉಳಿದರೆ ಉಳಿದ ಸದ್ಗುಣಗಳೆಲ್ಲ ಮಣ್ಣುಪಾಲಾಗುವವು. ನಿರ್ಭೀತರಾಗದೆ ಸತ್ಯ- ಅಹಿಂಸೆಗಳನ್ನು ಸಾಧಿಸುವದು ಅಸಾಧ್ಯ.

ನಿರ್ಭೀತಿಯೆಂದರೆ ಔದ್ಧತ್ಯವಲ್ಲ, ಆಕ್ರಮಕ ವೃತ್ತಿಯಲ್ಲ. ಇವೆಂದರೆ ಹೆದರಿಕೆಯ ಲಕ್ಷಣ. ನಿರ್ಭೀತಿಯೆಂದರೆ ಮನಸಿನ ಶಾಂತಿ. ಆದಕ್ಕಾಗಿ ದೇವರಲ್ಲಿ ಅಚಲ ವಿಶ್ವಾಸಬೇಕು.

ದೇವರಿಂದ ಬೇರ್ಪಡಿಸಲ್ಪಟ್ಟ ತಾನು ನಿರುಪಯೋಗಿ ಪ್ರಾಣಿಯೆಂದು ಭಕ್ತನು ಹೇಳಿದ್ದು ನೀವು ಕೇಳಿದ ಹಾಡಿನಲ್ಲಿ ಸ್ಪಷ್ಟವಾಗಿದೆ. ದೇವರೆ ಸದೈವ ನಮ್ಮ ಆಶ್ರಯ ಸ್ಥಾನ. ಅವನನ್ನು ನಂಬಿದವರಿಗೆ ಹೆದರಿಕೆ ಇಲ್ಲವೆಂದು ಮಹಾತ್ಮರು ಹೇಳಿದರು.

## “ಏಕಲಾ ಚಲೊ”

ಶ್ರೀಮತಿ ನಂದಿತಾ ಕೃಪಲಾನಿಯವರು ಸುಸ್ವರದಲ್ಲಿ ಹಾಡಿದ ರವೀಂದ್ರರ “ಏಕಲಾ ಚಲೋ ರೆ” ಎಂಬ ಗೀತವನ್ನು ಆಧಾರವಾಗಿಟ್ಟುಕೊಂಡು ಮಹಾತ್ಮರು ನಿನ್ನೆ ಸಾಯಂಪ್ರಾರ್ಥನೆಯಲ್ಲಿ ಅದೇ ಉಪದೇಶವನ್ನು ಪುನಃ ಹೇಳಿದರು. ವಿಪತ್ಪರಂಪರೆಗಳೆಷ್ಟಿದ್ದರೂ ಭಕ್ತನು ಏಕಾಂಗಿಯಾಗಿ ನಡೆವ ಸಾಮರ್ಥ್ಯವುಳ್ಳವನಾಗಿರಬೇಕೆಂದು ಈ ಹಾಡಿನ ಪಲ್ಲವಿಯಲ್ಲಿ ಹೇಳಲಾಗಿದೆಂದು ಮಹಾತ್ಮರು ಹೇಳಿದರು. ದೇವರು ಸದಾ ತಮ್ಮ ಬೆಂಬಲಿಗನಾಗಿರುವನೆಂಬುದನ್ನು ಅರಿತರೆ ತಾನು ಏಕಾಂಗಿಯಾಗಿರುವೆನೆಂಬ ಹೆದರಿಕೆ ಉಂಟಾಗುವದಿಲ್ಲ. ಕಿಡಿಗೇಡಿಗಳಿಗಾಗಿ ಈ ಭಜನೆಯಿಲ್ಲ. ಅವರೆಂದಿಗೂ ಏಕಾಂಗಿಯಾಗಿ ನಡೆಯಲಾರರು.

ಲೀಗಿನವರು ಮಂತ್ರಿಮಂಡಳದಲ್ಲಿ ಸೇರಿದ್ದಾರೆ. ತಮ್ಮ ಕಾರ್ಯವನ್ನು ಯಶಸ್ವಿಯಾಗಿಸಬೇಕೆಂಬ ನಿರ್ಧಾರದಿಂದಲೆ ಅವರು ಅಲ್ಲಿ ಹೋಗಿದ್ದಾರೆಂದು ನಾನು ಆಶಿಸುತ್ತೇನೆ. ಹದಿನಾಲ್ಕು ಜನರ ಕೈಯಲ್ಲಿ ದೇಶದ ಆಡಳಿತೆ ಇದೆ. ಕೋಟ್ಯಂತರ ಜನರಿಗೆ ಅನ್ನ ಬಟ್ಟೆಗಳನ್ನು ಒದಗಿಸಿ ಶಿಕ್ಷಣ ಸೌಕರ್ಯಗಳನ್ನು ಕೊಟ್ಟು ದೇಶದಲ್ಲಿಯ ಶಾಂತತೆಯನ್ನೂ ವ್ಯವಸ್ಥೆಯನ್ನೂ ಕಾಯ್ದುಕೊಳ್ಳುವದು ಅವರ ಕರ್ತವ್ಯವಾಗಿದೆ. “ಅವರೆಲ್ಲ ಒಂದೇ ಗುಂಪಿನವರೆಂದು ನಡೆದುಕೊಳ್ಳಲು ಶಕ್ತರಾಗಲಿ, ಅವರ ಕೃತಿಗಳೆಲ್ಲ ಉದಾತ್ತವಾಗಲಿ, ಲಂಚಗುಳಿತನ ದುರ್ವ್ಯಾಪಾರವೆಲ್ಲ ಅಳಿದುಹೋಗಲಿ ಎಂದು ನಾವೆಲ್ಲ ದೇವರಲ್ಲಿ ಪ್ರಾರ್ಥಿಸೋಣ.”

ಹೊಸದಿಲ್ಲಿ
೨೭-೧೦-೪೬

ಪ್ಯಾರೇಲಾಲ





## ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿ

### ಮಹತ್ವದ ಗೊತ್ತುವಳಿಗಳು

ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಸರ್ವಸಾಧಾರಣ ಸಭೆ ಬಾಗಲಕೋಟಿಯಲ್ಲಿ ೨೦ನೇ ತಾರೀಕು ಮಧ್ಯಾಹ್ನ ೪ ಗಂಟೆಗೆ ಶ್ರೀ ಬಸವೇಶ್ವರ ಕಾಲೇಜಿನಲ್ಲಿ ಸೇರಿತ್ತು. ಸಭೆಗೆ ೨೬ ಸದಸ್ಯರು ಬಂದಿದ್ದರು. ಸಭೆಯಲ್ಲಿ ಮಹತ್ವದ ೫ ಗೊತ್ತುವಳಿಗಳು ಸ್ವೀಕೃತವಾದವು. ಗೋವಾದಲ್ಲಿ ಗಂಭೀರ ಪರಿಸ್ಥಿತಿಯುತ್ತ ಸಮಿತಿ ಗಮನ ಎಳೆದಿದೆ. ಗೋವಾ ಸರಕಾರದವರು ಜನರ ಮೂಲಭೂತ ನಾಗರಿಕ ಹಕ್ಕುಗಳನ್ನು ಕಾಲ್ಕೆಳಗೆ ಮೆಟ್ಟುವದನ್ನು ಹಾಗು ಅಮಾನುಷ ಶಿಕ್ಷೆ ವಿಧಿಸಿರುವದನ್ನು ಈ ಸಭೆ ತೀವ್ರವಾಗಿ ಪ್ರತಿಭಟಿಸತ್ತದೆ. ಕೇಂದ್ರದಲ್ಲಿಯ ತಾತ್ಕಾಲಿಕ ಜನಾದರಣೀಯ ಸರಕಾರ ಈ ಬಗೆಯ ದಬ್ಬಾಳಿಕೆಯನ್ನು ತೀವ್ರವಾಗಿ ನಿಲ್ಲಿಸುವಂತೆ ರಾಜಕೀಯ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಮುಂತಾಗಿ ಸಮಿತಿಯು ಎರಡನೇ ಠರಾವಿನಲ್ಲಿ ಅಭಿಪ್ರಾಯ ಪಟ್ಟಿದೆ. ಬೆಳಗಾವಿ ವಿಜಾಪುರ ಜಿಲ್ಹೆಗಳ ಕೆಲ ಹಳ್ಳಿಗಳಲ್ಲಿ ಹಾಗು ಜಮಖಂಡಿ ಮುಧೋಳ ಮತ್ತು ಜತ್ತ ಸಂಸ್ಥಾನ ಹಳ್ಳಿಗಳಲ್ಲಿ ಇತ್ತಿತ್ತಲಾಗಿ ದರೋಡೆಗಳು ನಡೆದಿದ್ದು ಇವುಗಳನ್ನು ಮೊನ್ನೆ ಮೊನ್ನೆ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದವರು ಮಾಡುತಿರುವರೆಂದು ಜವಾಬದಾರ ಪೋಲೀಸ ಅಧಿಕಾರಿಗಳು ಅನ್ನಹತ್ತಿರುವರು. ಹೀಗಾಗುವದರಿಂದ ಕಾಂಗ್ರೆಸ ಸಂಸ್ಥೆಯ ಹೆಸರು ಕೆಡುವದಲ್ಲದೆ ಜನತೆಯ ಜೀವನವು ಕಷ್ಟದಾಯಕವಾಗುವದು. ಇದರ ನಿಜತ್ವವನ್ನು ಕಂಡು ಹಿಡಿಯುವ ಉದ್ದಿಶ್ಯ ಹಾಗು ಇಂಥ ಪುಂಡಾಟಿಕೆಯ ಕಾರ್ಯಗಳನ್ನು ತಡೆಯಲು ಸಹಾಯವಾಗುವ ಉದ್ದಿಶ್ಯ ಒಂದು ವಿಚಾರಣಾ ಸಮಿತಿಯನ್ನು ಈ ಸಭೆ ನಿಯಮಿಸುತ್ತದೆ. ಈ ಸಮಿತಿಯವರು ಪೂರ್ಣ ವಿಚಾರಣೆ ನಡಿಸಿ ವರದಿ ಒಪ್ಪಿಸಿದ ನಂತರ ಸರಕಾರದ ಕೂಡ ಮುಂದಿನ ಕ್ರಮದ ಬಗ್ಗೆ ಪ್ರಾಂತಿಕ ಕಾಂಗ್ರೆಸ ಕಮೀಟಿ ವಿಚಾರ ಮಾಡಿ ನಿರ್ಧರಿಸಬೇಕು.

ಕಾಂಗ್ರೆಸ ಪ್ರಾಂತದಲ್ಲಿ ಕಾಂಗ್ರೆಸ ಘೋಷಣ ಪತ್ರಿಕೆಯಲ್ಲಿಯಂತೆ ದ್ರುತಗತಿಯಿಂದ ಕಾರ್ಯ ನಡೆದುದನ್ನು ಈ ಸಭೆ ಸ್ವಾಗತಿಸುತ್ತಿದೆ. ಆದರೆ ಅದೇ ಕಾಲಕ್ಕೆ ಆಯಾ ಉಪಕ್ರಮ ಕೈಕೊಳ್ಳುವಾಗ ಕಾಂಗ್ರೆಸ ಸಮಿತಿ ಮುಂತಾದವುಗಳ ಸಮ್ಮತಿ ಸಹಕಾರ ಬೆಂಬಲ ಸಾಕಷ್ಟು ಪಡೆಯುವದವಶ್ಯವಾಗಿದೆ ಎಂದು ಈ ಸಮಿತಿಯ ಅಭಿಪ್ರಾಯ. ಕೊನೆಯಲ್ಲಿ ಸಮಿತಿಯು ನಮ್ಮ ದೇಶದಲ್ಲಿ ನಡೆದ ಜಾತೀಯ ಗಲಭೆಗಳನ್ನು ಖಂಡಿಸಿರುವದು. ಇದೇ ಆಗಸ್ಟ ೧೬ಕ್ಕೆ ಮುಸ್ಲಿಂಲೀಗ ಪ್ರತ್ಯಕ್ಷ ಹೋರಾಟದ ಗೊತ್ತುವಳಿ ಮಾಡಿದಂದಿನಿಂದ ಅಖಿಲ ಭಾರತದಲ್ಲಿ ಮುಖ್ಯ ಕಲಕತ್ತಾ ಡಾಕಾ ಮುಂಬಯಿಯಂಥ ದೊಡ್ಡ ಪಟ್ಟಣಗಳಲ್ಲಿ ಹತ್ಯಾಕಾಂಡ ಅವ್ಯಾಹತವಾಗಿ ಸಾಗಿದೆ. ಇವೆಲ್ಲವುಗಳನ್ನು ಈ ಸಮಿತಿ ತೀವ್ರವಾಗಿ ಖಂಡಿಸುತ್ತದೆ. ಅಲ್ಲದೆ ಮೊನ್ನೆ ಮೊನ್ನೆ ನೌಖಾಲಿ ಜಿಲ್ಲೆಯಲ್ಲಿ ಪ್ರಾರಂಭವಾಗಿ ಈಗಲೂ ಅವ್ಯಾಹತವಾಗಿ ಸಾಗಿರುವ ಪಾಶವೀ ಅತ್ಯಾಚಾರ ಕೊಲೆ, ಸುಲಿಗೆ, ದೊಡ್ಡ ಪ್ರಮಾಣದ ಮೇಲೆ ಧರ್ಮಾಂತರ ಸ್ತ್ರೀಯರ ಮಾನಭಂಗ ಮೊದಲಾದ ಭಯಾನಕ ಸ್ಥಿತಿ ತೀರ ಖಂಡನೀಯ ಮತ್ತು ಶೋಚನೀಯವಾಗಿದೆ. ಇಂಥ ಪರಿಸ್ಥಿತಿ ಪುನಃ ಪುನಃ ಬರುವದನ್ನು ನೋಡಿದರೆ ಬಂಗಾಲದ ಗವರ್ನರ ಮತ್ತು ಮಂತ್ರಿಮಂಡಳ ಆಡಳಿತ ಸಾಗಿಸಿಕೊಂಡು ಹೋಗಲು ಅಶಕ್ತರು ಅಯೋಗ್ಯರಿದ್ದಾರೆಂದು ಈ ಸಭೆಯ ಸ್ಪಷ್ಟ ಅಭಿಪ್ರಾಯ. ಆದುದರಿಂದ ಗವರ್ನರರನ್ನು ತೀವ್ರ ಕಳಿಸಬೇಕು. ಮಂತ್ರಿಮಂಡಳವನ್ನು ವಿಸರ್ಜಿಸಬೇಕು. ಮತ್ತು ಪ್ರಾಂತದ ಎಲ್ಲ ಜನರ ವಿಶ್ವಾಸಕ್ಕೆ ಪಾತ್ರವಾದ ಪ್ರಾಂತೀಯ ರಾಷ್ಟ್ರೀಯ ಸರಕಾರ ಸ್ಥಾಪಿಸಬೇಕೆಂದು ಸಮಿತಿಯ ಅಭಿಪ್ರಾಯ, ಈ ವಿಷಯವನ್ನು ಕೇವಲ ಪ್ರಾಂತಿಕ ಸರಕಾರಗಳಿಗೆ ಬಿಡದೆ ಹಿಂದುಸ್ತಾನ ಸರಕಾರದವರು ಜವಾಬ್ದಾರಿ ಹೊರುವದವಶ್ಯವಾಗಿದೆಂದು ಈ ಸಭೆಯ ಅಭಿಪ್ರಾಯ. ಈ ಪರಿಸ್ಥಿತಿಯಲ್ಲಿ ಜನತೆ ಯಾವದೇ ಬಗೆಯಿಂದ ಗಾಬರಿಗೊಳ್ಳದೆ ಆತ್ಮರಕ್ಷಣೆಗಾಗಿ ಸಂಘಟನೆ ಮಾಡಿಕೊಂಡು ಧೈರ್ಯದಿಂದ ಎದುರಿಸಲು ಸಿದ್ಧರಾಗಬೇಕೆಂದು ಈ ಸಮಿತಿ ಅಭಿಪ್ರಾಯಪಡುತ್ತದೆ.

### ಕಾರ್ಯಕಾರಿ ಸಮಿತಿ

ಕಾರ್ಯಕಾರಿ ಸಮಿತಿಯ ಸಭೆ ೨೦ನೇ ತಾರಿಕು ಸೇರಿತ್ತು. ಕೆಲವು ಕಾಂಗ್ರೆಸ್ಸಿಗರು ಮರಾಠಿ ಭಾಷೆಯ ಪರವಾಗಿ ಕನ್ನಡದ ವಿರುದ್ಧ ಪ್ರಚಾರ ಮಾಡುವದನ್ನು ಮತ್ತು ಈ ತರದ ಪ್ರಚಾರ ಕಾರ್ಯದಲ್ಲಿ ಕೆಲವರ ಮೇಲೆ ಹಲ್ಲೆ ಕೂಡ ಮಾಡಿದ ಆಕ್ಷೇಪಕರ ನಡತೆಯನ್ನು ಈ ಸಭೆ ವಿಷಾದದಿಂದ ಗಮನಿಸುತ್ತದೆ. ಇಂಥ ಅನುಚಿತ ವರ್ತನೆಗಳನ್ನು ಖಂಡಿಸುತ್ತದೆ. ಇಂಥ ಹೇಯ ವರ್ತನೆಗಳ ಪುನರಾವೃತ್ತಿಯಾದಲ್ಲಿ ತಕ್ಕ ಉಪಾಯ ಕೈಕೊಳ್ಳಲಾಗುವದೆಂದು ಎಚ್ಚರಿಕೆ ಕೊಡುತ್ತದೆ. ಎಲ್ಲ ಜಿಲ್ಹಾ ಕಾಂಗ್ರೆಸ ಕಮೀಟಿಗಳು ೧೦೦ ರೂ. ಮಾನ್ಯತೆ ಹಣವನ್ನು ಕೊಡಬೇಕೆಂದು ನಿರ್ಣಯಿಸುತ್ತದೆ. ಕೆಲ ಕಾಂಗ್ರೆಸ್ಸಿಗರು ಕಾಂಗ್ರೆಸ ಪ್ರತಿಸ್ಪರ್ಧಿಯಾಗಿ ಜಿಲ್ಹೆಗಳಲ್ಲಿ ರೈತರ ಸಂಘಗಳನ್ನು ಸ್ಥಾಪಿಸುವ ಧೋರಣ ಕೈಕೊಂಡದ್ದನ್ನು ಲಕ್ಷಿಸಿ ಈ ಸಭೆ ಖಂಡಿಸುತ್ತದೆ. ಪ್ರಾಂತಿಕ ಕಾಂಗ್ರೆಸ ಕಮೀಟಿಯು ನೇಮಿಸಿದ ಪ್ರತಿನಿಧಿ ಮುಖಾಂತರ ಎಲ್ಲರೂ ರೈತ ಸಂಘಟನೆಯನ್ನು ಮಾಡಬೇಕೆಂದು ಕೇಳಿಕೊಳ್ಳುತ್ತದೆ.

# ಕರ್ನಾಟಕ

## ಬೆಳಗಾವಿ

ನವೆಂಬರ ೧೬-೧೭ ನೇ ತಾರೀಕು ಬೆಳಗಾವಿಯಲ್ಲಿ ಅಖಿಲ ಕರ್ನಾಟಕ ಮಹಿಳಾ ಪರಿಷತ್ತಿನ ೫ ನೇ ಅಧಿವೇಶನ ನಡೆಯುವದು. ಶ್ರೀಮತಿ ಲೀಲಾವತಿ ಮುನಶಿಯವರು ಇದರ ಅಧ್ಯಕ್ಷತೆ ವಹಿಸುವರು. ಶ್ರೀಮತಿ ಪದ್ಮಾವತಿಬಾಯಿ ಅಂಗಡಿಯವರು ಸ್ವಾಗತಾಧ್ಯಕ್ಷರಾಗಿರುವರು. ಪರಿಷತ್ತಿನ ಕಾಲಕ್ಕೆ ಸ್ತ್ರೀಯರ ಕಲಾಕೌಶಲ್ಯದ ಪ್ರದರ್ಶನ ತೆರೆಯಲ್ಪಡುವದು. ಬಹುಮಾನಗಳನ್ನು ಹಂಚಲಾಗುವದು.

ಮುಂಬಯಿ ಕರ್ನಾಟಕ ವತನದಾರ ಕುಲಕರ್ಣಿ ಸಂಘದ ಸಭೆ ಗೋಕಾಕದಲ್ಲಿ ೨೨ ಕ್ಕೆ ಕೂಡಿ ಸಂಘಟನೆಯನ್ನು ಹೆಚ್ಚಿಸಿ ಸಹಕಾರಿ ಸಂಘಗಳನ್ನು ಸ್ಥಾಪಿಸುವ, ಈಗ ಮುಂದಾಗಿರುವ ೧೪ ತಾಲೂಕುಗಳ ಕುಲಕರ್ಣಿಯರಂತೆ ಎಲ್ಲರೂ ಶಿಸ್ತಿನಿಂದ ಕಾರ್ಯ ಸಾಗಿಸಬೇಕೆಂದೂ ಅದಕ್ಕಾಗಿ ಅಧ್ಯಕ್ಷರು ಸಂಚಾರ ಕೈಕೊಳ್ಳಬೇಕೆಂದೂ ಮುಂದಿನ ಸಭೆಯನ್ನು ೧೧-೧೧-೪೬ ನೇ ದಿನ ಕೂಡಿಸತಕ್ಕದ್ದೆಂದೂ ಗೊತ್ತಾಯಿತು.

## ಉತ್ತರ ಕನ್ನಡ

ಕಾರವಾರದ ರಾಷ್ಟ್ರಸೇವಾದಲದವರು ಗೋವೆಯ ಗಡಿಗೆ ಹೋಗಿ ಕರಪತ್ರಗಳನ್ನು ಹಂಚಿ ಬಂದಿರುತ್ತಾರೆ. ಈ ಸತ್ಯಾಗ್ರಹವನ್ನು ಯಶಸ್ವಿ ಮಾಡಲು ಸರಕಾರಿ ಅಧಿಕಾರಿಗಳು ಹಾಗು ಪೋಲೀಸರಿಗೆ ಬಹಿಷ್ಕಾರ ಹಾಕಲು ಮತ್ತು ಸೀದಾ ಪ್ರಮಾಣವನ್ನು ಸಾಕಷ್ಟು ಕೊಡಬೇಕೆಂದು ನಗರ ಸಂಕೀರ್ತನೆಗಳಿಂದ ಪ್ರಚಾರ ನಡೆಸಿರುವರು.

ಗೋವಾ ಸತ್ಯಾಗ್ರಹ ಸಮಿತಿಯ ಸದಸ್ಯರಾದ ಶ್ರೀ ಬಿ. ಎಸ್. ಮಾವಿನಕುರ್ವೆಯವರು ಗೋವಾ ಗವರ್ನರರಿಗೆ ಪತ್ರ ಬರೆದು ಸೇವಾದಲದ ಸ್ವಯಂಸೇವಕರನ್ನು ಅನ್ಯಾಯದಿಂದ ಸೆರೆಹಿಡಿದು ದಂಡಿಸಿ ಕೆಟ್ಟರೀತಿಯಿಂದ ನಡೆಸಿಕೊಂಡ ಬಗ್ಗೆ ೫೦೦೦ ರೂಪಾಯಿ ಪರಿಹಾರ ದ್ರವ್ಯ ಕೊಡಬೇಕೆಂದು ಕೇಳಿದ್ದಾರೆ. ಸ್ವಯಂಸೇವಕರು ಯಾವ ಕಾಯದೆಗಳನ್ನೂ ಮುರಿದಿಲ್ಲ. ಆದುದರಿಂದ ಅಂತರ್‌ರಾಷ್ಟ್ರೀಯ ಕಾಯದೆಯಂತೆ ಅವರನ್ನು ನಡೆಸಿಕೊಳ್ಳಬೇಕಿತ್ತು. ಪರಿಹಾರ ದ್ರವ್ಯ ಕೊಡದಿದ್ದರೆ ವರಿಷ್ಠಾಧಿಕಾರಿಗಳ ಕಡೆಗೆ ತಿಳಿಸಬೇಕಾಗುವದೆಂದು ಮುಂತಾಗಿಯೂ ಬರೆದಿದ್ದಾರೆ.

## ಧಾರವಾಡ

ಹಾನಗಲ್ಲದಲ್ಲಿ ಎಳೆಯರ ಬಳಗದ ಕೈದೀವಿಗೆ ಎಂಬ ಕೈಬರಹದ ಪತ್ರಿಕೆಯ ಪ್ರಕಾಶನ ಸಮಯದಲ್ಲಿ ಶ್ರೀ ವಿ. ಬಿ. ನಾಯಕರು ಕೇವಲ ಲಲಿತ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗದೆ ಔದ್ಯೋಗಿಕ ವಾಙ್ಮಯ ನಿರ್ಮಾಣದಲ್ಲಿ ಮನಸ್ಸು ಹಾಕಬೇಕೆಂದು ಹೇಳಿದರು.

ಗದಗ ನಗರ ಸಭೆಗೆ ಶ್ರೀ ಹೊನಗುಡಿಯವರು ಅಧ್ಯಕ್ಷರಾಗಿಯೂ ಶ್ರೀ ಪುಣೇಕರರು ಉಪಾಧ್ಯಕ್ಷರಾಗಿಯೂ ಆರಿಸಲ್ಪಟ್ಟದ್ದು ಕ್ರಮಬದ್ಧವಾಗಿದೆಂದು ಸ್ಥಾನಿಕ ಸ್ವರಾಜ್ಯ ಖಾತೆಯ ಮಂತ್ರಿಗಳು ತಿಳಿಸುತ್ತಾರೆ.

ಕರ್ನಾಟಕದ ಅನೇಕ ಸ್ಥಳಗಳಲ್ಲಿ ಅಜದ ಹಿಂದ ದಿನಾಚರಣೆ ವಿಜೃಂಭಣೆಯಿಂದ ಜರಗಿಸಲ್ಪಟ್ಟಿತು. ಸುಭಾಷಚಂದ್ರರ ಮೆರವಣಿಗೆ ಮೊದಲಾದ ಕಾರ್ಯಕ್ರಮ ನಡೆದವು.

ಧಾರವಾಡ ಜಿಲ್ಹಾ ಲಂಚ ನಿರೋಧಕ ಖಾತೆಯ ಪೋಲೀಸರು ಹುಬ್ಬಳ್ಳಿ ಮುನಸಿಪಾಲಿಟಿಯ ಅಂಗಡಿ ಗುಮಾಸ್ತ ಅಧಿಕಾರಿಗಳ ಮೇಲೆ ೧೦ ರೂಪಾಯಿ ಲಂಚ ತೆಗೆದುಕೊಂಡರೆಂದು ಖಟ್ಲೆ ಹಾಕಿದ್ದಾರೆಂದು ತಿಳಿಯುತ್ತದೆ. ಪೋಲೀಸರು ಅವರ ಝಡತಿ ಮಾಡಲಾಗಿ ೧೦ ರೂ. ನೋಟು ಸಿಕ್ಕವಂತೆ.

ಮನೋಹರ ಗ್ರಂಥಮಾಲೆ ಹಾಗು ಜೀವನ ಪುಸ್ತಕಾಲಯದ ಪರವಾಗಿ ಗದುಗಿನಲ್ಲಿ ಕಳೆದ ೩೦—೩೧ ಕ್ಕೆ ಶಾರದೋತ್ಸವ ವಿಜೃಂಭಣೆಯಿಂದ ಶ್ರೀ ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು. ಪಂಪ ಕವಿಯ ಬಗ್ಗೆ ಮತ್ತು ಅವನ ಕೃತಿಗಳ ಬಗ್ಗೆ ಬೇರೆ ಬೇರೆ ಮಹನೀಯರು ಭಾಷಣ ಮಾಡಿದರು. ಎರಡನೇ ದಿನ ಜ್ಞಾನ ಪ್ರಸಾರಕ ಉಪನ್ಯಾಸಗಳು ನಡೆದವು. ಎರಡೂ ದಿನ ರಾತ್ರಿ ವಿವಿಧ ವಿನೋದಾವಳಿಗಳು ಜನರನ್ನು ಸಂತುಷ್ಟಗೊಳಿಸಿದವು.

ಧಾರವಾಡ ಜಿಲ್ಹಾ ಕಲೆಕ್ಟರರ ಅಧ್ಯಕ್ಷತೆಯಲ್ಲಿ ಬಟ್ಟೆಯ ನಿಯಂತ್ರಣ ಸಮಿತಿಯ ಸಭೆ ಸೇರಿ ಮೂರು ಜನ ಲಾಯಿಸೆನ್ಸದಾರರು ಕೂಡಿ ಒಂದೊಂದು ಅಂಗಡಿ ನಡೆಸಬೇಕೆಂದು ಗೊತ್ತಾಯಿತು.

ರಾಷ್ಟ್ರೀಯ ಸ್ವಯಂಸೇವಕ ಸಂಘದ ಪ್ರಾಂತಿಕ ಸಮ್ಮೇಲನ ಸಂಘದ ಸಂಚಾಲಕರಾದ ಶ್ರೀ ನಾರಾಯಣರಾವ ಗೋಳವಲಕರರ ನೇತೃತ್ವದಲ್ಲಿ ಧಾರವಾಡದಲ್ಲಿ ನಡೆಯಿತು. ೧೦೦೦ ಸ್ವಯಂಸೇವಕರು ಸಾಯಂಕಾಲ ಧ್ವಜಪ್ರಣಾಮ ಮಾಡುವ ದೃಶ್ಯ ಪ್ರೇಕ್ಷಣೀಯವಾಗಿತ್ತು.

ಗದಗಿನಲ್ಲಿ ಇದೇ ಡಿಸೆಂಬರ ತಿಂಗಳ ಕೊನೆಯ ವಾರದಲ್ಲಿ ನಡೆಯುವ ೧೫ನೇ ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಲನಕ್ಕೆ ಶ್ರೀ ಸುಮತಿಬಾಯಿ ತಾರಾನಾಥ ಇವರು ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು.

ಹಿಂದುಸ್ಥಾನೀ ಸೇವಾದಲದ ಸಲಹೆಗಾರರಾಗಿ ಕಾಂಗ್ರೆಸ ಕಾರ್ಯಸಮಿತಿಯಿಂದ ಆರಿಸಲ್ಪಟ್ಟ ಡಾ. ಎನ್. ಎಸ್. ಹರ್ಡೀಕರರನ್ನು ಸನ್ಮಾನಿಸುವದಕ್ಕಾಗಿ ಕರ್ನಾಟಕ ಕ್ರಿಶ್ಚನ್ ಸಂಘದವರು ೨೪ನೆ ತಾರೀಕು ಸಂತೋಷಕೂಟವನ್ನೇರ್ಪಡಿಸಿದ್ದರು. ಶ್ರೀ ದಿವಾಕರ, ಜಾರ್ಜ ಅರಳಿಕಟ್ಟಿ, ಕಬಿರ, ಸುಜಿರ ಮೊದಲಾದವರು ಭಾಷಣ ಮಾಡಿ ಡಾಕ್ಟರರು ದೇಶಕ್ಕೆ ಮತ್ತು ಹಿಂದುಸ್ಥಾನೀ ಸೇವಾದಲಕ್ಕೆ ಸಲ್ಲಿಸಿದ ಸೇವೆಯನ್ನು ಬಣ್ಣಿಸಿದರು. ಶ್ರೀ ಸಿಂಟ್ರೋ ಇವರು ಅಧ್ಯಕ್ಷತೆ ವಹಿಸಿದ್ದರು. ಡಾಕ್ಟರರು ಬೇಗ ಮೀರತಕ್ಕೆ ಕಾಂಗ್ರೆಸ ಅಧಿವೇಶನದ ವ್ಯವಸ್ಥೆಗಾಗಿ ಹೋಗಲಿರುವರು.

ಮುಂಬೈ ಸರಕಾರದ ಪಾರ್ಲಮೆಂಟರಿ ಸೆಕ್ರೆಟರಿಗಳಾದ ಶ್ರೀ ಗಾಂವಕಾರರು ಕಳೆದ ಶನಿವಾರ ಹಳ್ಯಾಳಕ್ಕೆ ಬಂದು ತಾಲೂಕಿನ ಜನರು ಸಂಕಷ್ಟಗಳನ್ನು ನಿವೇದಿಸಿದರು. ಶ್ರೀ ಗಾಂವಕಾರರು ಅವುಗಳನ್ನು ನಿವಾರಿಸಲು ಯತ್ನ ಮಾಡುವದಾಗಿ ಹೇಳಿದರು.

## ವಿಜಾಪುರ

ಬಾಗೇವಾಡಿ ತಾಲೂಕಿನಲ್ಲಿಯ ಸಾಸನೂರಲ್ಲಿ ಇಬ್ಬಣಗಳಲ್ಲಿ ೨೭ನೇ ತಾರೀಕು ಬಡೆದಾಟವಾಗಿ ಹತ್ತು ಜನರು ಸತ್ತರಲ್ಲದೆ ಅನೇಕರಿಗೆ ಗಾಯಗಳಾದವು. ಗಾಯಾಳುಗಳಲ್ಲಿ ಮತ್ತೆ ಮೂವರು ಆಸ್ಪತ್ರೆಯಲ್ಲಿ ಮಡಿದರು. ಸತ್ತವರಲ್ಲಿ ಹರಿಜನರ ಸಂಖ್ಯೆ ಹೆಚ್ಚಿಗಿದ್ದುದು ದುರ್ದೈವದ ಸಂಗತಿ. ಇಬ್ಬಣಗಣಲ್ಲಿಯ ಹಳೆಯ ತಿಕ್ಕಾಟವೇ ಕಾರಣವಿದ್ದು ಜಾತೀಯ ಸ್ವರೂಪವೇನೂ ಇರುವದಿಲ್ಲ.

ಆಗಸ್ಟ ಚಳವಳಿಯಲ್ಲಿ ನಿಂತ ಹೋಗಿದ್ದ ವಿಜಾಪುರದ ಉದಯ ಪತ್ರಿಕೆ ಮತ್ತೆ ಪ್ರಾರಂಭವಾಗಿದೆ.

ಬಾಗೇವಾಡಿಯಲ್ಲಿ ಪ್ಲೇಗು ಪ್ರಾರಂಭವಾಗಿದ್ದು ಈಗಾಗಲೆ ೪ ಜನರು ಮರಣ ಹೊಂದಿದ್ದಾರೆ.

ಬೀಳಗಿಪೇಠಾ ರೈತ ಪರಿಷತ್ತು ಶ್ರೀ ಟಿ ಆರ್ ನೇಸ್ವಿಯವರ ಅಧ್ಯಕ್ಷತೆಯಲ್ಲಿ ಸೇರಿತ್ತು. ರೈತರ ಸಂಬಂಧದ ೧೭ ಗೊತ್ತುವಳಿಗಳು ಸ್ವೀಕೃತವಾದವು.

ವಿಜಾಪುರದಲ್ಲಿ ಸಪ್ಟೆಂಬರ ೧೮ರಿಂದ ಪ್ಲೇಗು ಪ್ರಾರಂಭವಾಗಿ ಒಂದು ತಿಂಗಳಲ್ಲಿ ೫೦ಜನ ಪೀಡಿತರಾಗಿ ೨೦ಜನ ಮರಣಹೊಂದಿರುವರು, ಮೂರನೇ ವಾರದಲ್ಲಿ ಪರಿಸ್ಥಿತಿ ಸುಧಾರಿಸಿದ ಲಕ್ಷಣ ಕಂಡುಬಂದರೂ ೪ನೇ ವಾರ ರೋಗ ಹೆಚ್ಚು ಹಬ್ಬಿ ೧೬ ಜನರಿಗೆ ಪ್ಲೇಗು ಬಂದು ೬ ಜನರು ಮರಣ ಹೊಂದಿದರು. ಇದರಿಂದ ಜನ ಗಾಬರಿಗೊಂಡು ಗುಡಿಸಲುಗಳಿಗೆ ಹೋಗ ಹತ್ತಿದ್ದಾರೆ.

ವಿಜಾಪುರ ಜಿಲ್ಹೆಯಲ್ಲಿ ಈ ಸಲ ಮಳೆ ಹೆಚ್ಚಾಗಿ ಬೆಳೆ ಚನ್ನಾಗಿದ್ದುದರಿಂದ ಮತ್ತು ಮುಂಗಾರಿ ಸುಗ್ಗಿ ಬೇಗನೆ ಪ್ರಾರಂಭವಾಗುವದರಿಂದ ಈವರೆಗೆ ನಡೆದ ಬರಗಾಲ ಕಾಮಗಿರಿಗಳು ನವಂಬರ ೧ರಿಂದ ನಿಲ್ಲಿಸಲ್ಪಡಲಿರುವವು. ಈ ಕೆಲಸಗಳಲ್ಲಿ ಒಟ್ಟಿಗೆ ೧೬೦೦೦ ಜನ ಇರುವರು. ಹಿಂಗಾರಿ ಬೆಳೆಗೆ ಇನ್ನೂ ಒಂದು ಚತೋಮಳೆ ಬೇಕಾಗಿದೆ.

## ಬಳ್ಳಾರಿ

ಬಳ್ಳಾರಿ ಸರ್ಕಲ್ ಕಾಂಗ್ರೆಸ ಸಮಿತಿಯ ಕಾರ್ಯಕಾರಿ ಮಂಡಲದ ಸಭೆ ಸೇರಿ ಸದ್ಯದ ಪರಿಸ್ಥಿತಿಯಲ್ಲಿ ನಗರ ಸಭೆಯ ಚುನಾವಣೆಗಳನ್ನು ಹೋರಾಡಬಾರದೆಂದು ತೀರ್ಮಾನಿಸಲಾಯಿತು. ಅದೇ ರೀತಿ ಹೊಸಪೇಟೆ ನಗರ ಸಭೆಯ ಚುನಾವಣೆಯನ್ನು ಕಾಂಗ್ರೆಸ್ಸಿನ ಪರವಾಗಿ ಸ್ಪರ್ಧಿಸಬಾರದೆಂದು ನಿರ್ಣಯಿಸಿರುವರು.

ಮದ್ರಾಸ ಸರಕಾರದ ಆರೋಗ್ಯ ಖಾತೆಯ ಮಂತ್ರಿಗಳಾದ ಶ್ರೀಮತಿ ರುಕ್ಮಿಣಿ ಲಕ್ಷ್ಮೀಪತಿಯವರೂ ನ್ಯಾಯ ಖಾತೆಯ ಮಂತ್ರಿಗಳಾದ ಶ್ರೀ ಕೆ. ಭಾಷ್ಯಂರೂ ಬಳ್ಳಾರಿಗೆ ೨೪ ಕ್ಕೆ ಬಂದು ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡುತ್ತ ಕಾಂಗ್ರೆಸ ಸರಕಾರದ ರೀತಿ ನೀತಿಗಳನ್ನು ತಿಳಿಸಿದರು.

ಬಳ್ಳಾರಿಯಲ್ಲಿ ಕೌಲಪೇಟೆಯಲ್ಲಿರುವ ಶ್ರೀ ಕೋದಂಡರಾಮಸ್ವಾಮಿ ದೇವಸ್ಥಾನವನ್ನು ಹರಿಜನರಿಗೆ ಮುಕ್ತದ್ವಾರ ಮಾಡುವ ಸಮಾರಂಭ ವಿಜೃಂಭಣೆಯಿಂದ ಜರಗಿಸಲಾಯಿತು.

---

ದಕ್ಷಿಣ ಸಂಸ್ಥಾನಗಳ ಪ್ರಾದೇಶಿಕ ಸಮಿತಿಯ ಸಭೆ ಕೊಲ್ಹಾಪುರದಲ್ಲಿ ನವಂಬರ ೬ ನೇ ತಾರೀಕಿಗೆ ಸೇರಿ ದಕ್ಷಿಣ ಸಂಸ್ಥಾನಗಳ ಒಕ್ಕೂಟದ ಬಗ್ಗೆ ಮಹತ್ವದ ನಿರ್ಣಯಗಳನ್ನು ಕೈಕೊಳ್ಳಲಾಗುವದು.

## ಮುಂಬಯಿ

ಮುಂಬಯಿ ಸರಕಾರದವರು ಪ್ರಾಂತದಲ್ಲೆಲ್ಲ ಪ್ರಾಥಮಿಕ ಶಾಲೆಗಳ ಕಟ್ಟಡಗಳನ್ನು ಕಟ್ಟುವ ಯೋಜನೆ ಕೈಕೊಳ್ಳುವವರಿದ್ದಾರೆ. ಒಂದು ಜಿಲ್ಹೆಗೆ ಲಕ್ಷ ರೂಪಾಯಿಗಳಂತೆ ಸರಕಾರದವರು ಈ ಸಂಬಂಧದಲ್ಲಿ ವೆಚ್ಚಮಾಡಬಯಸುತ್ತಾರೆ. ಪ್ರಾಂತದಲ್ಲಿಯ ದಾನಶೂರ ಕರ್ಣರು ಮುಂದೆ ಬಂದು ಧನ ಸಹಾಯ ಮಾಡಬೇಕೆಂದು ಬಿನ್ನೈಸುತ್ತಾರೆ. ಅಲ್ಲದೆ ಈ ಸಂಬಂಧದಲ್ಲಿ ಕೆಲ ಮಾತುಗಳನ್ನು ಬರೆದಿದ್ದಾರೆ.

ಮುಂಬಯಿ ಸರಕಾರದ ಮುಖ್ಯಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ದೀಪಾವಳಿಯ ನಿಮಿತ್ತ ಜನತೆಗೆ ಸಂದೇಶ ಕಳಿಸಿ ಶಾಂತಿ ಸುಖ ಸಮೃದ್ಧಿಗಳ ಬಗ್ಗೆ ಕೇಳಿಕೊಂಡಿರುವರು.

ಅಕ್ಟೋಬರ ೧೭ಕ್ಕೆ ಮುಗಿದ ವಾರದಲ್ಲಿ ಮುಂಬಯಿಯಲ್ಲಿ ೩೭ ಗ್ಯಾಲನ ಬೇಕಾಯದೆ ಶೇರ ಸೆರೆ ಮತ್ತು ೧೦೪೪ ಗ್ಯಾಲನ್ ಬೇರೆ ಮದ್ಯ ಸಿಕ್ಕಿದೆ.

ಪುನರ್ರಚನೆಯ ಮಂತ್ರಿಗಳಾದ ಶ್ರೀ ಎಲ್. ಎಂ. ಪಾಟೀಲರು ಆಯಾ ಜಿಲ್ಹೆಗಳಲ್ಲಿ ಕರೆಯುವ ಜಿಲ್ಹಾ ಪರಿಷತ್ತುಗಳಿಗೆ ಪತ್ರಿಕಾ ಪ್ರತಿನಿಧಿಗಳನ್ನು ಆಮಂತ್ರಿಸಬೇಕೆಂದು ನಿರ್ಧರಿಸಿದ್ದಾರೆ. ಕಲೆಕ್ಟರರಿಗೆ ಆ ರೀತಿ ತಿಳಿಸಲಾಗಿದೆ.

ಮುಂಬಯಿ ಸರಕಾರದವರು ಗ್ರಾಮಾಂತರ ಕೈಗಾರಿಕೆ ಮತ್ತು ಉದ್ಯೋಗಗಳ ಅಭಿವೃದ್ಧಿಗಾಗಿ ವಿಚಾರ ಮಾಡಿ ವರದಿ ಒಪ್ಪಿಸಲು ಒಂದು ಸಮಿತಿಯನ್ನು ನೇಮಿಸಿದ್ದಾರೆ.

ಗ್ರಾಮ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸುವ ತಮ್ಮ ಧೋರಣಗನುಸಾರವಾಗಿ ಮುಂಬಯಿ ಸರಕಾರದವರು ಪ್ರಾಥಮಿಕ ಶಾಲೆಗಳಲ್ಲಿ ಕೈಗಾರಿಕೆಗಳನ್ನು ಒತ್ತಾಯದಿಂದ ಕಲಿಸುವದವಶ್ಯವೆಂದು ಭಾವಿಸಿ ಸ್ಕೂಲ ಬೋರ್ಡದವರಿಗೆ ಪರಿಪತ್ರದಿಂದ ಇದನ್ನು ತಿಳಿಸಿದ್ದಾರೆ. ಇದರ ವೆಚ್ಚವನ್ನೆಲ್ಲ ಸರಕಾರದವರೆ ವಹಿಸುವರು. ತೋಟಪಟ್ಟಿ ಕೆಲಸ, ನೂಲುವದು ಇದಲ್ಲದೆ ಹಾಯಸ್ಕೂಲ ವರ್ಗಗಳಲ್ಲಿ ನೇಯುವ, ಕಾಗದ ರಟ್ಟು ಮಾಡುವದು ಮೊದಲಾದವುಗಳು ಆಯಾ ಶಾಲೆಗಳಲ್ಲಿ ಈ ಕೈಗಾರಿಕೆಗಳನ್ನು ಸಂಘಟಿತ ರೀತಿಯಿಂದ ಸಾಗಿಸಲು ಸಣ್ಣ ಸಮಿತಿ ನಿಯಮಿಸಬೇಕೆಂದು ಈ ಪರಿಪತ್ರದಲ್ಲಿ ಹೇಳಲಾಗಿದೆ.

## ಮದ್ರಾಸ

ಮದ್ರಾಸ ಪ್ರಾಂತದಲ್ಲಿರುವ ಮೂನಸಿಪಾಲಿಟಿಗಳ ಹಾಗು ಪಂಚಾಯತ ಬೋರ್ಡುಗಳ ಭಂಗಿ ಜನರ ಮೂಲ ಸಂಬಳವನ್ನು ನೂರಕ್ಕೆ ೨೫ ರಷ್ಟು ಏರಿಸಲು ಮೊದಲಿನ ಹಾಗು ಎರಡನೆ ದರ್ಜೆಯ ಮುನಿಸಿಪಾಲಿಟಿಗಳಲ್ಲಿರುವವರಿಗೆ ತಿಂಗಳಿಗೆ ಒಂದು ರೂಪಾಯಿ ಹಾಗು ಪಂಚಾಯತ ಬೋರ್ಡುಗಳ ನೌಕರರಿಗೆ ತಿಂಗಳಿಗೆ ಎಂಟಾಣೆ ಪ್ರಾವಿಡೆಂಟ ಫಂಡು ಕೊಡಲು ಮದ್ರಾಸ ಸರಕಾರದವರು ನಿರ್ಧರಿಸಿರುವರೆಂದು ತಿಳಿಯುತ್ತದೆ.

ಪಂಡಿತ ಜವಾಹರಲಾಲರು ಅದ್ವಿತೀಯ ಮುತ್ಸದ್ದಿಗಳಾಗಿದ್ದು ಅವರು ಬಯಸುವಂತೆ ಫ್ರೆಂಚ ಹಿಂದುಸ್ತಾನ ವಿಶಾಲ ಭಾರತದೊಡನೆ ಕೂಡಿಕೊಳ್ಳಲಿ ಎಂದು ಫ್ರೆಂಚ ಹಿಂದುಸ್ತಾನದ ಗವರ್ನರರಾದ ಸಿ. ಎಫ್. ಬ್ಯಾರನ್‌ರು ಅಭಿಪ್ರಾಯ ವ್ಯಕ್ತಮಾಡಿರುವರು.

## ಬಂಗಾಲ

ಮಧ್ಯವರ್ತಿ ಶಾಸನ ಸಭೆಯ ಸದಸ್ಯರಾಗಿದ್ದ ಡಾ. ಹಸನ್ ಸುರವರ್ದಿಯವರ ನಿಧನದಿಂದ ತೆರವಾದ ಸ್ಥಳಕ್ಕೆ ಮುಸ್ಲಿಂಲೀಗಿನ ಪರವಾಗಿ ನಾಝೀಮುದ್ದೀನರು ಅವಿರೋಧ ಆರಿಸಿ ಬಂದಿರುವರು.

ಕೇಂದ್ರ ಸರಕಾರದವರು ೮ ಜನ ಅಜದ ಕೈದಿಗಳನ್ನು ಮುಕ್ತಮಾಡಿದ್ದು ಕ್ಯಾ. ಬುರಾಣುದ್ದೀನ ಕ್ಯಾ. ರಶೀದ ಕ್ಯಾ. ಸಿಂಗಾರಸಿಂಗ, ಕ್ಯಾ ಫತ್ತೇಖಾನ ಮೊದಲಾದವರ ಪ್ರಕರಣಗಳನ್ನು ಪರಿಶೀಲಿಸಲು ಸಂರಕ್ಷಣ ಖಾತೆಗೆ ತಿಳಿಸಲಾಗಿದೆಂದು ಗೃಹಖಾತೆಯಿಂದ ಅಜದ ಸೇನಾ ಪರಿಹಾರ ಸಮಿತಿಗೆ ಪತ್ರ ಬಂದಿರುವದು.

## ಸಂಯುಕ್ತಪ್ರಾಂತ

ಶ್ರೀಮತಿ ವಿಜಯಲಕ್ಷ್ಮಿ ಪಂಡಿತರಿಗೆ ಮೆಕ್ಸಿಕೊಕ್ಕೆ ಬರಲು ಅಲ್ಲಿನ ಸರಕಾರದಿಂದ ಆಮಂತ್ರಣ ಬಂದಿದೆ. ಮೆಕ್ಸಿಕೊಕ್ಕೆ ಹೋಗಬೇಕೋ ಬೇಡವೋ ಎಂಬದನ್ನು ನಾನಿನ್ನೂ ನಿರ್ಣಯಿಸಿಲ್ಲ. ಆದರೂ ಆಮಂತ್ರಣವನ್ನು ಸ್ವೀಕರಿಸಿದ್ದೇನೆ. ಅರ್ಜಂಟಾನಕ್ಕೂ ನಾನು ಭೆಟ್ಟಿ ಕೊಡಬಹುದು.

ಹಿಂದುಗಳನ್ನು ಒತ್ತಾಯದಿಂದ ಕುಲಗೆಡಿಸುವದಾಗಲಿ ಹೆಣ್ಣುಮಕ್ಕಳನ್ನು ಒತ್ತಾಯದಿಂದ ಕೆಡಿಸುವದಾಗಲಿ ಮತಾಂತರವೇ ಅಲ್ಲ ಇಂಥ ದುರ್ಘಟ ಪ್ರಸಂಗದಲ್ಲಿ ಕೇವಲ ದೇವರ ನಾಮೋಚ್ಚಾರದಿಂದಲೆ ಶುದ್ಧೀಕರಣವಾಗುವದು ಎಂದು ಕಾಶೀ ಪಂಡಿತ ಸಭೆಯವರು ಶಾಸ್ತ್ರಾಧಾರವಾಗಿ ಈಗ ಸಾರಿದ್ದಾರೆ.

## ಕನ್ನಡ ಸಂಸ್ಥಾನ

ಮಿರಜ, ಜತ್ತ ಮತ್ತು ಫಲ್ಟಣ ಸಂಸ್ಥಾನಾಧೀಶರರು ನವಂಬರ ೧೦ ನೇ ತಾರೀಖಿನೊಳಗಾಗಿ ತಮ್ಮ ಪ್ರಜರಿಗೆ ಅಧಿಕಾರ ಒಪ್ಪಿಸಿ ಕೊಡಲಿದ್ದಾರೆಂದು ತಿಳಿಯುತ್ತದೆ.

ಕೊಪ್ಪಳ ರೈತಪರಿಸ್ಥಿತಿ ಅತಿ ಶೋಚನೀಯವಿರುವದು. ದೇಶದ ಜೀವಾಳವೆ ರೈತರಿದ್ದು ಅವರ ಹಿತ ರಕ್ಷಣೆಯಲ್ಲಿಯೆ ದೇಶದ ಹಿತವಿದೆ. ಆದುದರಿಂದ ಹೈದ್ರಾಬಾದದ ಹೊಸ ದಿವಾಣರು ಕೂಡಲೆ ಇತ್ತ ಗಮನಿಸಿ ಪರಿಹಾರೋಪಾಯವನ್ನು ತೀವ್ರ ಕೈಕೊಳ್ಳುವರೆಂದು ಆಶಿಸುತ್ತೇವೆಂದು ಮುಂತಾಗಿ ಶ್ರೀಮತಿ ಕಮಲಾದೇವಿಯವರು ಒಂದು ಹೇಳಿಕೆ ಹೊರಡಿಸಿ ಅಭಿಪ್ರಾಯಪಟ್ಟಿದ್ದಾರೆ.

ತೇರದಾಳ ಪೇಟಾ ಹರಿಜನ ಪರಿಷತ್ತು ಜಮಖಂಡಿ ಸಂಸ್ಥಾನದ ಲೋಕನಿಯುಕ್ತ ಮಂತ್ರಿ ಶ್ರೀ ಬ. ದಾ. ಜತ್ತಿಯವರ ಅಧ್ಯಕ್ಷತೆಯಲ್ಲಿ ಕಳೆದ ರವಿವಾರ ಸೇರಿತ್ತು. ಶ್ರೀ ಗುಂಡಪ್ಪ ಇವರು ಪರಿಷತ್ತನ್ನು ಪ್ರಾರಂಭಿಸಿದರು. ಜತ್ತಿಯವರು ತಮ್ಮ ಭಾಷಣದಲ್ಲಿ ಅಸ್ಪೃಶ್ಯತೆಯ ಕಲಂಕವನ್ನು ಬೇಗ ತೆಗೆದುಹಾಕಬೇಕೆಂದು ಬಿನ್ನವಿಸಿದರು. ಹರಿಜನರ ಸಾಮಾಜಿಕ ಅಪಾತ್ರತೆ ದೂರ ಮಾಡುವ ಕಾಯದೆ ಸಾಂಗಲಿ ಸಂಸ್ಥಾನದಲ್ಲಿಯೂ ಆಚರಣೆಗೆ ತರಬೇಕು, ಹರಿಜನರಿಗೆ ಉಚ್ಚ ಶಿಕ್ಷಣ ಸೌಕರ್ಯ ಕೊಡಬೇಕು. ದೇವದಾಸಿ ಪದ್ಧತಿಯನ್ನ ನಿಲ್ಲಿಸಬೇಕು ಮುಂತಾದ ಗೊತ್ತವಳಿ ಸ್ವೀಕೃತವಾದವು.

ಈಸೂರು ದುರಂತದಲ್ಲಿ ಜೀವಾವಧಿ ಶಿಕ್ಷೆಗೊಳಗಾಗಿದ್ದವರು ರಾಜಪುತ್ರಿ ಗಾಯತ್ರೀದೇವಿಯ ಜನನದ ನಿಮಿತ್ತ ಬಂಧಮುಕ್ತ ಮಾಡಲ್ಪಟ್ಟರು.





# ಕೇಂದ್ರ ಶಾಸನ ಸಭೆಯ ಶರತ್ಕಾಲದ ಅಧಿವೇಶನ

## ನಡುಗಾಲ ಸರಕಾರ ಸ್ಥಾಪನೆಯ ಹೊಸ ವಾತಾವರಣದಲ್ಲಿ ಪ್ರಾರಂಭ

## ಸುಭಾಷ ಬೋಸರ ಬಗ್ಗೆ ಹೆಚ್ಚಿನ ಸಂಗತಿ ಗೊತ್ತಿಲ್ಲ

### ಕೇಂದ್ರ ಶಾಸನ ಸಭೆ

ಕೇಂದ್ರ ಶಾಸನ ಸಭೆಯ ಶರತ್ಕಾಲದ ಅಧಿವೇಶನ ಸೋಮವಾರ ೨೮ ನೇ ತಾರೀಕಿನಿಂದ ಪ್ರಾರಂಭವಾಗಿದೆ. ಕಾಂಗ್ರೆಸ್, ಲೀಗ, ಉಳಿದ ಅಲ್ಪಸಂಖ್ಯಾಕ ಪಕ್ಷ ಪ್ರತಿನಿಧಿಗಳಿಂದ ನಡುಗಾಲ ಸರಕಾರ ಸ್ಥಾಪಿತವಾಗಿ ಆ ಸರಕಾರದ ಮಂತ್ರಿಗಳು ಮೊದಲನೆ ಸಲವೆ ಕೇಂದ್ರ ಶಾಸನ ಸಭೆಯ . ಖುರ್ಚಿಗಳನ್ನಲಂಕರಿಸಿರುವದರಿಂದ ಈ ಅಧಿವೇಶನಕ್ಕೆ ಅತ್ಯಂತ ಮಹತ್ವ ಬಂದಿದೆ. ಇಷ್ಟು ದಿನಗಳ ವರೆಗೆ ವಿರೋಧಿ ಪಕ್ಷದ ಖುರ್ಚಿಗಳನ್ನಲಂಕರಿಸುತಿದ್ದ ಕಾಂಗ್ರೆಸ ಪಕ್ಷ ಪ್ರತಿನಿಧಿಗಳಿಂದು ಸರಕಾರ ಪಕ್ಷದಲ್ಲಿ ಕುಳಿತುಕೊಳ್ಳಹತ್ತಿರುವರು. ಲೀಗ ಪಕ್ಷ ಪ್ರತಿನಿಧಿಗಳೂ ಈ ಸರಕಾರದಲ್ಲಿ ಸೇರಿದ್ದು ಆ ಪಕ್ಷದ ಸದಸ್ಯರೂ ಸರಕಾರದ ಖುರ್ಚಿಗಳನ್ನಲಂಕರಿಸುತಿರುವರು. ವಿರೋಧಿ ಪಕ್ಷಗಳ ಖುರ್ಚಿಗಳಲ್ಲಿ ಕೇವಲ ಯುರೋಪಿಯನ್ ಪಕ್ಷದವರು, ನಾಮಕರಣ ಹೊಂದಿದವರು ಮತ್ತು ಸ್ವತಂತ್ರ ಪಕ್ಷದ ಕೆಲ ಸದಸ್ಯರು ಕೂಡುತಿರುವರು. ಸರಕಾರಿ ಖುರ್ಚಿಗಳಲ್ಲಿ ಮೊದಲನೆಯದರಲ್ಲಿ ಪಂಡಿತ ಜವಾಹರಲಾಲರು, ಅವರ ಹತ್ತರ ಲಿಯಾಕತ ಅಲ್ಲೀಖಾನರು ಮತ್ತು ಅವರ ಹತ್ತರ ಸರದಾರ ವಲ್ಲಭಭಾಯರು ಕೂಡುತಿರುವರು. ಪಂಡಿತ ಜವಾಹರಲಾಲರು ಕೇಂದ್ರ ಶಾಸನ ಸಭೆಯ, ಹಾಗೂ ಅಬ್ದುಲ್ ನಿಶಿತಾರರು ವಿಧಿಮಂಡಳದ ಧುರೀಣರಾಗಿ ಆರಿಸಲ್ಪಟ್ಟಿರುವರು. ಸತ್ಯನಾರಾಯಣ ಸಿಹರು ಕೇಂದ್ರ ಶಾಸನ ಸಭೆಯಲ್ಲಿ ಸರಕಾರದ ಮುಖ್ಯ ಪ್ರಚೋದಕರಾಗಿರುವರು. ಪಂಡಿತ ಜವಾಹರಲಾಲ, ಸರದಾರ ವಲ್ಲಭಭಾಯಿ, ಡಾ. ಜಾನ ಮಥಾಯಿ, ಸಿ. ರಾಜಗೋಪಾಲಾಚಾರ್ಯ, ಅಸಫಅಲ್ಲಿ, ಜಗಜೀವನರಾಮ, ಜೆ. ಎನ್. ಮಂಡಲ, ಲಿಯಾಕತ ಅಲ್ಲೀಖಾನ ಮತ್ತು ಚುಂದ್ರಿಗಾರರು ಕೇಂದ್ರ ಶಾಸನ ಸಭೆಯ ಮತ್ತು ಅಬ್ದುಲ್‌ರಾಬ ನಿಶಿತಾರ, ಸಿ. ಎಚ್. ಭಾಭಾ, ಡಾ. ರಾಜೇಂದ್ರ ಪ್ರಸಾದ, ಗಜಫರ ಅಲ್ಲೀಖಾನ ಮತ್ತು ಸರದಾರ ಬಲದೇವಸಿಂಗ ಇವರು ವಿಧಿಮಂಡಳದ ಸದಸ್ಯರಾಗಿ ನೇಮಿಸಲ್ಪಟ್ಟಿದ್ದಾರೆ. ಎನ್. ಎಂ. ಜೋಶಿಯವರು ಹೊಸದಾಗಿ ನಾಮಕರಣ ಹೊಂದಿ ವಿರಾಜಮಾನರಾಗಿರುವರು.

### ಪ್ರತಿಜ್ಞಾವಿಧಿ

ಹೊಸದಾಗಿ ಶಾಸನ ಸಭೆಯಲ್ಲಿ ವಿರಾಜಮಾನರಾಗಿರುವ ಮಂತ್ರಿಗಳ ಪ್ರತಿಜ್ಞಾವಿಧಿ ಮೊದಲು ಜರುಗಿತು. ಅನಂತರ ಪ್ರಶ್ನೋತ್ತರಗಳು ನಡೆದವು. ಶಾಸನ ಸಭೆಯ ಹೊರಗೆ ಗುಂಪುಗೂಡಿ ಮತಪ್ರದರ್ಶನ ಮಾಡುತಿದ್ದ ಜನರ ಮೇಲೆ ಅಶ್ರುವಾಯು ಪ್ರಯೋಗಮಾಡಿ ಚದುರಿಸಲಾಯಿತು. ಪುಂಡರು ಕಾಂಗ್ರೆಸ್ ಮೋಟರದ ಮೇಲಿರುವ ಧ್ವಜಗಳನ್ನು ಕಿತ್ತಿಕೊಂಡರು. ಹಲವರು ಜವಾಹರಲಾಲ ಮತ್ತು ಅಸಫಅಲ್ಲಿಯವರ ಮೋಟರಿನಲ್ಲಿ ಹೊತ್ತಿದ ಸಿಗರೇಟುಗಳನ್ನು ಒಗೆದರು. ಅದರಿಂದ ಜವಾಹರಲಾಲರ ಮೋಟರಿನಲ್ಲಿಯ ಗಾದಿ ಸ್ವಲ್ಪ ಸುಟ್ಟಿತು.

ಹಣಕಾಸಿನ ಮಂತ್ರಿಗಳಾದ ಲಿಯಾಕತಅಲ್ಲಿಖಾನರು, ಭಾರತವು ಅಂತರ್ ರಾಷ್ಟ್ರೀಯ ನಿಧಿಯ ಬ್ಯಾಂಕಿನ ಸದಸ್ಯವುಳಿಯಬೇಕೆಂಬ ಗೊತ್ತುವಳಿ ಮಂಡಿಸಿದರು. ಸ್ಟರ್ಲಿಂಗ ಹಣದ ಪ್ರಶ್ನೆ ಬಗೆಹರಿಯುವ ವರೆಗೆ ಇದರ ನಿರ್ಣಯವಾಗಬಾರದೆಂದು ಹೇಳುವವರಿರುವರು. ಆದರೆ ನಾವೀಗ ಆದಷ್ಟು ಬೇಗ ಅದರ ವಿಚಾರವಿನಿಮಯ ಮಾಡಲಿರುವೆವು. ಈಗ ಈ ಸಂಸ್ಥೆಯನ್ನು ಸೇರುವದರಿಂದ ಭಾರತಕ್ಕೆ ಲಾಭವಿದೆಯೆ ಎಂದಿಷ್ಟೆ ನಾವೀಗ ವಿಚಾರಮಾಡಬೇಕಾಗಿದೆಂದು ಅವರು ಹೇಳಿದರು. ಡಾ. ಜಾನಮಥಾಯಿಯವರು ಸ್ಟರ್ಲಿಂಗ ಹಣವನ್ನು ಕರಗಿಸಬೇಕೆಂಬುದಕ್ಕೆ ಯಾರೂ ಒಪ್ಪರು. ಯಾವದೊಂದು ಅನಿರೀಕ್ಷಿತ ಕಾರಣದಿಂದ ಔದ್ಯೋಗಿಕ ಹಾಗು ಒಕ್ಕಲತನದ ಪ್ರಗತಿಯಾಗದೆ ಹೋದರೆ ಅಂತರ್‌ರಾಷ್ಟ್ರೀಯ ನೆರವನ್ನು ಪಡೆಯಬೇಕಾಗುತ್ತದೆಂದು ಹೇಳಿದರು. ಎನ್. ವಿ. ಗಾಡಗೀಳ ಮತ್ತು ಇನ್ನಿತರರು ಭಾಷಣಮಾಡಿದರು. ಈ ಮಸೂದೆ ಸ್ವೀಕೃತವಾಯಿತು. ೧೯೩೪ ರ ಫ್ಯಾಕ್ಟರಿ ಕಾಯದೆ ತಿದ್ದುವ ಮತ್ತು ಔದ್ಯೋಗಿಕ ವಾದಗಳಲ್ಲಿ ವಿಚಾರಣೆ ನಡೆಸಲು ಅಧಿಕಾರ ಬೇಡುವ ಶ್ರೀ ಜಗಜೀವನರಾಮರ ಮಸೂದೆಗಳು ೧೯೩೭ರ ಫ್ಯಾಕ್ಟರಿ ಕಾಯದೆ ೧೯೩೩ರ ವೈದ್ಯಕ ಕಾಯದೆ ತಿದ್ದುಪಡಿ ಮಸೂದೆ ೧೯೨೩ ರ ಬಾಯಿಲರ ಕಾಯದೆ ತಿದ್ದುಪಡಿ ಮಸೂದೆ ಮಂಡಿಸಲ್ಪಟ್ಟವು. ದಕ್ಷಿಣ ಆಫ್ರಿಕೆಯ ಯುನಿಯನ್ ಸರಕಾರ ಅಲ್ಲಿಯ ಹಿಂದೀಯರನ್ನು ಅವಮಾನಿಸುತಿದ್ದು ಆ ಹಿಂದೀಯರನ್ನು ಕಾಪಾಡಲು ಭಾರತ ಸರಕಾರ ಅಸಮರ್ಥವಾಗಿದೆಂಬ ನಿಲುವಳಿ ಸೂಚನೆ ಮಂಡಿಸಲು ಅವಕಾಶ ಕೊಡಬೇಕೆಂದು ಸರದಾರ ಮಂಗಳಸಿಂಗರು ಕೇಳಿದರು. ಭಾರತದ ಭಾವನೆಗಳನ್ನು ವ್ಯಕ್ತಪಡಿಸಲು ಸರಕಾರವನ್ನು ನಿಷೇಧಿಸುವ ಠರಾವನ್ನು ಮಂಡಿಸುವದು ವಿಚಿತ್ರವಾಗಿದೆಂದು ಪಂ. ಜವಾಹರಲಾಲರು ಉತ್ತರ ಕೊಡುತ್ತ ಇದರ ಬಗ್ಗೆ ಸರಕಾರ ಎಲ್ಲ ಬಗೆಯ ಉಪಾಯ ಕೈಕೊಳ್ಳುವದೆಂದು ಹೇಳಿದರು. ಅಧ್ಯಕ್ಷರು ನಿಲುವಳಿ ಸೂಚನೆಯನ್ನು ನಿಯಮ ಬಾಹ್ಯಮಾಡಿದರು. ಕಲಕತ್ತೆಯ ದಂಗೆಯ ಬಗ್ಗೆ ಶಶಾಂಕ ಸನ್ಯಾಲರು ಅಹಮದಾಬಾದ ಮುಂಬಯಿ ದಂಗೆಗಳ ಬಗ್ಗೆ ಕಿಲ್ಲೇದಾರರು ನಾಸಿಕ ಜಿಲ್ಹೆಯ ದಂಗೆಯ ಬಗ್ಗೆ ಅಹಮದ ಜಾಫರರು ಅಲಹಾಬಾದ ದಂಗೆಯ ಬಗ್ಗೆ ಗಜನಫರಉಲ್ಲಾರು ಚೀನಿಯಾಬಾದ ದಂಗೆಯ ಬಗ್ಗೆ ಮಹಮ್ಮದ ನೌಮನ್‌ರು, ನೌಖಾಲಿ ಬಗ್ಗೆ ಸತ್ಯಪ್ರಿಯ ಬ್ಯಾನರ್ಜಿಯವರು ನಿಲುವಳಿ ಸೂಚನೆ ತಂದರು. ಪ್ರಾಂತಿಕ ಸರಕಾರಗಳ ಹೊಣೆಯಲ್ಲಿ ಕೈಹಾಕುವದಿಲ್ಲೆಂದು ಅಧ್ಯಕ್ಷರು ಹೇಳಿ ಇವನ್ನೆಲ್ಲ ನಿಯಮಬಾಹ್ಯ ಮಾಡಿದರು. ಸರದಾರ ಪಟೇಲರು ಈ ಸಂಬಂಧದಲ್ಲಿ ಹೇಳುತ್ತ ಈ ದೊಂಬಿಗಳಲ್ಲಿ ಅನರ್ಥಕ್ಕೊಳಗಾದವರ ಬಗ್ಗೆ ವಿಷಾದವಾಗುತ್ತದೆ. ಇವುಗಳ ಬಗ್ಗೆ ಬರಿ ಚರ್ಚೆಯಿಂದ ಉದ್ದಿಷ್ಟ ಸಾಧ್ಯವಾಗದು. ಪುನಃ ಇವು ಸಂಭವಿಸದಂತೆ ನೋಡಿಕೊಳ್ಳಬೇಕೆಂದು ಮುಂತಾಗಿ ಹೇಳಿದರು.

ಪಂಡಿತ ಜವಾಹರಲಾಲರು ಭುಲಾಭಾಯರ ಬಗ್ಗೆ ಗೌರವಪರ ಉದ್ಗಾರ ತೆಗೆದರು.

ಹಿಂದುಸ್ತಾನದಲ್ಲಿ ಮುಂಬಯಿ ೨೪ (೩೫೨೦೦೦ ಕದರು), ಮದ್ರಾಸ ೧೬ (೩೨೫೦೦೦ ಕದರು), ಬಂಗಾಲ ೧೨ (೨೬೪೦೦೮ ಕದರು), ಸಂಯುಕ್ತಪ್ರಾಂತ ೧೫ (೪೩೭೦೦೦ ಕದರು), ಪಂಜಾಬ ೯ (೨೧೩೦೪೮ ಕದರು), ಬಿಹಾರ ೬ (೧೫೧೦೦ ಕದರು), ಮಧ್ಯಪ್ರಾಂತ ವರ್ಹಾಡ ೪ (೨೧೯೦೦೦ ಕದರು,) ಓಡಿಸಾ ೩ (೭೫೦೦೦ ಕದರು,) ಸಿಂಧ ೪ (೧೦೦೦೦೦ ಕದರು,) ಸಂಸ್ಥಾನಗಳು ೩೨ ಹೀಗೆ ಒಟ್ಟಿಗೆ ೧೨೫ ಜವಳಿ ಗಿರಣಿಗಳು ಹೊಸದಾಗಿ ಸ್ಥಾಪಿತವಾಗುವವೆಂದು ರಾಜಗೋಪಾಲಾಚಾರ್ಯರು ಒಂದು ಪ್ರಶ್ನೆಗೆ ಉತ್ತರ ಕೊಟ್ಟರು. ಇನ್ನೊಂದು ಪ್ರಶ್ನೆಗೆ ಉತ್ತರ ಕೊಡುತ್ತ ಶ್ರೀ ಬಿ. ಆರ್. ಸೇನರು ಭಾರತಕ್ಕೆ ಅಮೇರಿಕೆಯಿಂದ ಬರಬೇಕಾಗಿದ್ದ ಆಹಾರ ಧಾನ್ಯದಲ್ಲಿ ೧೬೪೦೦೦ ಟನ್ ಧಾನ್ಯ ಕಡಿಮೆ ಬಂದಿದೆ ಈ ಕೊರತೆಯನ್ನು ಇತರ ಉಪಾಯಗಳಿಂದ ತುಂಬಿಕೊಳ್ಳಲಾಗುವದೆಂದು ಹೇಳಿದರು. ಭಾರತದ ಆಹಾರ ಧಾನ್ಯದಲ್ಲಿ ೪೦ ಲಕ್ಷ ಟನ್ನಿನಷ್ಟು ಇಲಿಗಳಿಂದ ೨೦ ಲಕ್ಷ ಟನ್ನಿನಷ್ಟು ಅಯೋಗ್ಯ ರೀತಿಯ ಸಂಗ್ರಹದಿಂದ ಹಾಳಾಗುತ್ತದೆಂದು ಉತ್ತರ ಕೊಟ್ಟರು.

### ಗವ್ಹರ್ನರರ ಹುದ್ದೆ ರದ್ದುಪಡಿಸಲಾಗುವದು

ಪಂಡಿತ ಜವಾಹರಲಾಲ ನೆಹರೂರ ಮೊನ್ನೆ ಗಡಿನಾಡ ಮತ್ತು ಗುಡ್ಡಗಾಡು ಪ್ರದೇಶದ ಸಂಚಾರದ ಬಗ್ಗೆ ೨೯ ನೇ ತಾರೀಕು ಪ್ರಶ್ನೆ ಕೇಳಲ್ಪಟ್ಟವು. ಪಂಡಿತ ಜವಾಹರಲಾಲರು ಉತ್ತರ ಕೊಡುತ್ತ ಹೀಗೆ ಹೇಳಿದರು. ಗಫರಖಾನ ಮತ್ತು ಮೆಹರಚಂದ ಖನ್ನಾರವರು ಹೊರಡಿಸಿದ ಪ್ರಕಟನೆಗಳು ವೈಯಕ್ತಿಕ ಅಭಿಪ್ರಾಯಗಳು. ನಮ್ಮ ಪ್ರವಾಸದಲ್ಲಿ ಹಿಂಸೆ ನಡೆದುದು ಸುಳ್ಳಲ್ಲ. ಈ ಬಗ್ಗೆ ಪೂರ್ಣ ವಿಚಾರ ಮಾಡಲಾಗುವದು. ರಾಜಕೀಯ ಖಾತೆಯು ರೆಸಿಡೆಂಟ ಮತ್ತು ಪೊಲಿಟಿಕಲ್ ಏಜಂಟರ ಮುಖಾಂತರ ಸಂಸ್ಥಾನಗಳ ಮೇಲ್ವಿಚಾರಣೆ ಮಾಡುತ್ತಲಿದೆ ವಿದೇಶ ಖಾತೆ ಅದರಿಂದ ಪ್ರತ್ಯೇಕವಾಗಿದೆ. ಇದರಲ್ಲಿ ಮಂತ್ರಿಮಂಡಳ ಕೈಹಾಕಲಾರದು. ನೋಕರ ವರ್ಗ ಒಂದೇ ಇದ್ದುದರಿಂದ ತಪ್ಪು ತಿಳಿವಳಿಕೆಗೆ ಅವಕಾಶವಿದೆ. ನಾನು ಈ ಪ್ರವಾಸ ಕೈಕೊಳ್ಳಬಾರದೆಂದು ಕೆಲವರು ಸೂಚಿಸಿದರು. ಕೆಲವರು ಹೋಗಬಹುದೆಂದರು. ಗವರ್ನರರು ದಿಲ್ಲಿಯವರೆಗೆ ಬಂದು ಈ ಸಂಚಾರ ಮುಂದೂಡಲು ಸೂಚಿಸಿದರು. ಈ ಘಟನೆಗಳ ವಿಚಾರ ಮಾಡಲು ಅಲ್ಲಿಯ ಅಧಿಕಾರಿಗಳಿಗೆ ಹೇಳಲಾಗಿದೆ. ಬ್ರಿಟಿಶ್ ಹಿಂದುಸ್ತಾನದಲ್ಲಿ ಈ ಪ್ರದೇಶವನ್ನು ಸೇರಿಸಿಕೊಳ್ಳುವ ಇಚ್ಛೆ ಸರಕಾರಕ್ಕಿಲ್ಲ. ಈ ಪ್ರದೇಶದ ಒಳ ಹೊರ ಪರಿಸ್ಥಿತಿಯ ಬಗ್ಗೆ ಘಟನಾ ಸಮಿತಿಯ ಸಲಹೆ ಸಮಿತಿಯು ವಿಚಾರ ಮಾಡುವದು. ನಾವು ಅಧಿಕಾರ ಸ್ವೀಕರಿಸಿದ ಮೂರು ನಾಲ್ಕು ದಿನಗಳಲ್ಲಿ ವಜಿರಸ್ತಾನದಲ್ಲಿ ಬಾಂಬುದಾಳಿ ನಡೆಯಿತು. ಇದರಿಂದ ನನಗೆ ಬಹಳ ವ್ಯಸನವಾಯಿತು. ಅಲ್ಲಿನ ಕೆಲ ಪ್ರತಿನಿಧಿಗಳನ್ನು ಕಂಡು ಬರಬೇಕೆಂದು ನನಗೆನಿಸಿತು. ನನ್ನ ಸಂಚಾರದ ಉದ್ದೇಶ ಬಹಳ ಮಟ್ಟಿಗಾಗದಿದ್ದರೂ ಕೆಲ ಮಟ್ಟಿಗಾದರೂ ಸಫಲವಾಯಿತು.

ಹಿಂದುಸ್ತಾನ ಸರಕಾರದ ೧೯೩೫ ನೇ ಇಸ್ವಿಯ ೪೮ (೧)ಕಲ್ಮಿನನ್ವಯ ಅರಸರು ಗವರ್ನರರನ್ನು ನೇಮಿಸುತ್ತಾರೆ. ಆದರೆ ಇಂಥ ನೇಮಕ ಮಾಡುವಾಗ ಹಿಂದುಸ್ತಾನ ಸರಕಾರದ ಅಭಿಪ್ರಾಯಕ್ಕೆ ತಕ್ಕ ಮನ್ನಣೆ ಕೊಡುವದವಶ್ಯವಿದೆಂದರು. ಹಿಂದುಸ್ತಾನದ ಸ್ವಾತಂತ್ರ್ಯ ಸಂಪಾದಿಸುವದೆ ಹಿಂದುಸ್ತಾನ ಸರಕಾರದ ಧ್ಯೇಯವಾಗಿದೆ. ಸ್ವಾತಂತ್ರ್ಯ ಸಿಕ್ಕನಂತರ ಗವರ್ನರರ ಆವಶ್ಯಕತೆಯುಳಿಯುವದಿಲ್ಲ. ಗವರ್ನರರ ಹುದ್ದೆಯನ್ನೆ ರದ್ದುಪಡಿಸುವದು ಸರಕಾರದ ಉದ್ದೇಶವಿದ್ದು ಅದೇ ವರ್ಗದ ಬೇರೆ ಬಣ್ಣದವರನ್ನು ತರುವದು ಸರಕಾರದ ಇಚ್ಛೆ ಇಲ್ಲ. ಕ್ರಾಂತಿಕಾರಕ ಸರದಾರ ಅಜಿತಸಿಂಗರು ಮರಳಿಬರುವದಕ್ಕೆ ಯಾವ ಆತಂಕಗಳೂ ಇಲ್ಲ. ಅವರ ಪಾಸಪೋರ್ಟ ಮೊದಲಾದವುಗಳ ವ್ಯವಸ್ಥೆ ಮಾಡಲಾಗಿದೆ.

ಹಿಂದುಸ್ತಾನಕ್ಕೆ ಪರದೇಶಗಳಿಂದ ಬರುವ ಸರಕುಗಳಿಂದ ಇಲ್ಲಿನ ಉದ್ಯೋಗದಂಧೆಗಳಿಗೆ ಹಾನಿಯಾಗುವದಿಲ್ಲೆಂದು ಗೊತ್ತಾದರೆ ಮಾತ್ರ ಅವಕ್ಕೆ ಅಪ್ಪಣೆ ಕೊಡಲಾಗುವದೆಂದು ವಾಣಿಜ್ಯ ಮಂತ್ರಿ ಚುಂದ್ರಿಗಾರರು ಉತ್ತರ ಕೊಟ್ಟರು.

ಸುಭಾಷಚಂದ್ರರು ಸತ್ತಿರುವರೊ ಬದುಕಿರುವರೊ ಎಂಬ ಬಗ್ಗೆ ಸರಕಾರದಲ್ಲಿ ಸಾಕಷ್ಟು ಆಧಾರಗಳಿಲ್ಲ. ಸುಭಾಷರು ಜೀವಿಸಿದ್ದರೆ ನಮಗೆ ಅತೀವ ಸಂತೋಷವೆಂದು ಸರದಾರರು ಹೇಳಿದರು. ಸುಭಾಷರು ಪ್ರಕಟರಾದರೆ ಮಾತ್ರ ಅವರನ್ನು ಮಂತ್ರಿಮಂಡಳದಲ್ಲಿ ಸೇರಿಸಿಕೊಳ್ಳುವ ಪ್ರಶ್ನೆ ಉದ್ಭೂತವಾಗುವದು ಎಂದೂ ಅವರು ಹೇಳಿದರು. ಮಂತ್ರಿಗಳ ಭಾಷಣ ಸಂಪೂರ್ಣ ಕೇಳಿಸದ್ದರಿಂದ ಧ್ವನಿವಾಹಕ ಯಂತ್ರಗಳನ್ನಿಡಬೇಕೆಂದು ಶ್ರೀ ದ. ಪ. ಕರಮರಕರರು ಸೂಚಿಸಿದ್ದರಿಂದ ೩೦ ನೇ ತಾರೀಕು ಧ್ವನಿವಾಹಕ ಯಂತ್ರವನ್ನಿಡಲಾಗಿತ್ತು.

ಅಸ್ಪೃಶ್ಯ ವರ್ಗದವರಿಗೆ ಕೊಡಲಾಗುತಿರುವ ಶಿಕ್ಷಣ ಶಿಷ್ಯವೃತ್ತಿ ಮೊದಲಾದವುಗಳನ್ನು ಅವರು ಧರ್ಮಾಂತರ ಹೊಂದಿದರೂ ಕೊಡಲಾಗುವದೋ ಎಂದು ಕೇಳಿದ್ದಕ್ಕೆ ಶಿಕ್ಷಣ ಮಂತ್ರಿ ರಾಜಾಜಿಯವರು ಹಿಂದುಸ್ತಾನ ಸರಕಾರದವರು ಹಾಗೆ ಕೊಡಬಯಸುವದಿಲ್ಲ ಎಂದು ಹೇಳಿದರು. ಕೇವಲ ಅಸ್ಪೃಶ್ಯರ ಉದ್ಧಾರಕ್ಕಾಗಿಯೆಂದೆ ಈ ಶಿಷ್ಯವೃತ್ತಿಯನ್ನು ಕೊಡಲಾಗುತಿದ್ದು ಧರ್ಮಾಂತರ ಹೊಂದಿದವರು ಅದನ್ನು ಬಯಸಲಾರರೆಂದೂ ಹೇಳಿದರು.

೧೯೪೪–೪೫ ರಲ್ಲಿ ೭ ಕೋಟಿ ರೂಪಾಯಿ ಮತ್ತು ೧೯೪೫–೪೬ ರಲ್ಲಿ ೮ ಕೋಟಿ ರೂಪಾಯಿಗಳ ಕಾಣಿಕೆಯನ್ನು ಬಂಗಾಲ ಬರಗಾಲ ನಿವಾರಣೆಗಾಗಿಯೆಂದು ಬಂಗಾಲ ಪ್ರಾಂತಕ್ಕೆ ಕೊಡಲಾಯಿತೆಂದು ಅರ್ಥಸಚಿವರು ಉತ್ತರಿಸಿದರು. ಉಳಿದ ಯಾವ ಪ್ರಾಂತಗಳಿಗೂ ಇತ್ತೀಚಿಗೆ ಇಂಥ ಯಾವ ಕಾಣಿಕೆಗಳನ್ನು ಕೊಟ್ಟಿಲ್ಲೆಂದೂ ಅವರು ಹೇಳಿದರು.

ನಡುಗಾಲ ಸರಕಾರದ ಮಂತ್ರಿಗಳ ಕೂಡ ಜಯಹಿಂದ ಘೋಷಣೆಯನ್ನು ಮಾಡುತಿರುವಾಗ ಹಿಂದೀ ನೌಕಾ ಮತ್ತು ವೈಮಾನಿಕ ಪಡೆಗಳಲ್ಲಿ ಅದಕ್ಕೆ ಅವಕಾಶವಿಲ್ಲೆಂಬುದು ನಿಜವೊ ಎಂದು ಕೇಳಿದ್ದಕ್ಕೆ ಸಂರಕ್ಷಣ ಖಾತೆಯ ಸೆಕ್ರೆಟರಿಗಳು ಇಲ್ಲ ಎಂದು ಉತ್ತರ ಕೊಟ್ಟರು.

೧೯೨೬ ನೇ ಇಸ್ವಿಯ ಹಿಂದೀ ಟ್ರೇಡ ಯೂನಿಯನ ಕಾಯದೆ ತಿದ್ದುಪಡಿಯ ಚರ್ಚೆ ೩೦ ನೇ ತಾರೀಕು ನಡೆಯಿತು. ಈ ಮಸೂದೆಯನ್ನು ಜನಾಭಿಪ್ರಾಯ ತಿಳಿದುಕೊಳ್ಳಲು ಮುಂದಕ್ಕೆ ಹಾಕಬೇಕೆಂದು ಮುಸ್ಲಿಂ ಲೀಗಿನ ಈಸ್ಮಾಕ ಸೇಠರು ಸೂಚಿಸಿದರು. ನೌಮನ್‌ರು ಬೆಂಬಲ ಕೊಟ್ಟರು. ಎನ್ ಎಂ ಜೋಶಿಯವರು ಮೂಲ ಮಸೂದೆಗೆ ಬೆಂಬಲ ಕೊಟ್ಟರು. ಸರ್ ಕಾವಸಜಿ ಜಹಾಂಗೀರರು ಅವಸರದಿಂದ ಈ ಕಾಯಿದೆಯನ್ನು ಪಾಸು ಮಾಡಿಕೊಳ್ಳಬಾರದೆಂದು ಹೇಳಿದರು. ಗಾಡಗೀಳರು ಮಸೂದೆಗೆ ಬೆಂಬಲ ಕೊಡುತ್ತ ಕೂಲಿಕಾರರ ಸಂಘಟನೆಗೆ ಇದು ಅವಶ್ಯವಾಗಿದೆಂದು ಪ್ರತಿಪಾದಿಸಿದರು. ಬುಧವಾರದ ಕಾರ್ಯಕ್ರಮ ಇಷ್ಟರಿಂದ ಮುಗಿಯಿತು.

## ನಡುಗಾಲ ಸರಕಾರದ ಪುನರ್ಘಟನೆ

(೪ನೇ ಪುಟದಿಂದ)

ಗೊಳಿಸುತ್ತಿರುವಾಗ ನಮಗೆ ದೊರೆತಿರುವ ಅಧಿಕಾರದ ಬಗ್ಗೆ ಅಷ್ಟೊಂದು ಅಸ್ಥಿಯಿರುವ ಕಾರಣವಿಲ್ಲ. ಗುಡ್ಡಗಾಡು ಜನರು ಕಾಂಗ್ರೆಸ್ಸನ್ನು ಸೇರಿದರೆ ಅದರ ಬಲವು ಬೆಳೆಯುವದೆಂದು ಸರಕಾರಕ್ಕೆ ಅಂಜಿಕೆ. ಅಂತೆಯೆ ಪಂ. ಜವಾಹರಲಾಲರು ಗುಡ್ಡಗಾಡು ಪ್ರದೇಶಕ್ಕೆ ಹೋಗಬಾರದೆಂದು ಬ್ರಿಟಿಶ್ ಸರಕಾರದ ಬಯಕೆ. ಗುಡ್ಡಗಾಡು ಜನರೆಲ್ಲ ನಮ್ಮ ಬಾಂಧವರು. ಅಲ್ಲಿ ಸಂಭವಿಸಿದ್ದೆಲ್ಲ ಬ್ರಿಟಿಶರ ಸಂಚಿನಿಂದಲೆ. ಏನೇ ಆದರೂ ನಮಗೆ ಅದು ಸಹಾಯಕವೆ ಆಗಿದೆ. ಪಾಠ ಕಲಿಸಿದೆ. ಇಂಥ ನಡೆನುಡಿಗಳನ್ನಿಟ್ಟುಕೊಂಡಿರುವ ತಮ್ಮನ್ನು ನಾವು ನಂಬಬೇಕೆಂದು ಬ್ರಿಟಿಶರು ಬಯಸುವುದಾದರೂ ಹೇಗೋ? ಎಂದು ಮುಂತಾಗಿ ಗಫರಖಾನರು ಸ್ಪಷ್ಟೋಕ್ತಿಗಳನ್ನಾಡಿರುವರು. ಬ್ರಿಟಿಶರ ಕೈವಾಡದಿಂದ ಹಿಂದೀ ಮುಖಂಡರಲ್ಲಿ ಎಷ್ಟೊಂದು ಅಸಮಾಧಾನವಾಗಿದೆಂಬುದು ಇದರಿಂದ ಕಂಡು ಬರುವದು.

### ವೈಸರಾಯರ ಆಕಾಶವಾಣಿ

ವೈಸರಾಯ ಲಾರ್ಡ ವೇವೆಲ್ಲರು ೨೮ ನೇ ತಾರೀಕು ರಾತ್ರಿ ೮॥ ಗಂಟೆಗೆ ಆಕಾಶವಾಣಿಯಲ್ಲಿ ಭಾಷಣ ಮಾಡುತ್ತ ಹೀಗೆ ಹೇಳಿದರು. ಭಾರತದಲ್ಲಿ ಸಮ್ಮಿಶ್ರ ಸರಕಾರ ಸ್ಥಾಪಿತವಾದಂದಿನಿಂದ ಅದು ಸ್ವಾತಂತ್ರ್ಯ ಪಥದಲ್ಲಿ ಇನ್ನೊಂದು ಹೆಜ್ಜೆ ಮುಂದಿಟ್ಟಂತಾಗಿದೆಂದು ನಾನು ಸಾರಿ ಹೇಳುತ್ತೇನೆ. ಸದ್ಯದ ಆಡಳಿತದ ಹೊಣೆಯನ್ನು ಹೊರುವಲ್ಲಿ ಮತ್ತು ಬ್ರಿಟಿಶರ ಅಧಿಕಾರ ಪ್ರದಾನಕ್ಕೆ ಸುಗಮವಾದಂತೆ ರಾಜ್ಯಘಟನೆಯನ್ನು ರಚಿಸುವಲ್ಲಿ ಈಗ ಸರಕಾರದಲ್ಲಿದ್ದ ಪಕ್ಷಗಳು ಸಹಕಾರದಿಂದ ದುಡಿಯುವವೆಂದು ನಾನು ಆಶಿಸುತ್ತೇನೆ. ನಮ್ಮೆಲ್ಲರ ಮನಸ್ಸು ಉದ್ವಿಗ್ನವಾಗಿರುವಾಗ ನಮ್ಮ ಪ್ರಗತಿ ಸಾಧ್ಯವಿಲ್ಲ. ನಮ್ಮ ಧ್ಯೇಯವನ್ನು ಸಾಧಿಸಲು ಅಸ್ಥೆಯಿಂದ ದುಡಿಯುವದು ಶಕ್ಯವಾಗಲಾರದು. ಆದುದರಿಂದ ಜಾತೀಯ ದೊಂಬಿಗಳ ಹೆದರಿಕೆ ಇಡೀ ಭಾರತದಲ್ಲಿಲ್ಲದಂತಾಗಬೇಕು. ಈ ನನ್ನ ಬಿನ್ನಹವನ್ನು ಮನ್ನಿಸಬೇಕೆಂದು ನಾನು ನನ್ನ ಪರವಾಗಿಯೂ ನನ್ನ ಸರಕಾರದ ಪರವಾಗಿಯೂ ಕೇಳಿಕೊಳ್ಳುತ್ತೇನೆ. ಜನತೆಯ ಜೀವನವನ್ನೇ ಹಾಳುಮಾಡಿ ಭಾರತದ ಮುಖಕ್ಕೆ ಮಸಿ ಬಳಿಯುತಿರುವ ಈ ಜಾತೀಯ ದೊಂಬಿ ನಿಂತು ಹೋಗಬೇಕು. ನಾವೀಗ ಹಳೆಯ ದ್ವೇಷಾಸೂಯೆಗಳನ್ನು ಲಕ್ಷಿಸದೆ ಸ್ವತಂತ್ರ ಬಲಿಷ್ಠ ಭಾರತದ ನಿರ್ಮಾಣಕ್ಕಾಗಿ ಹೆಣಗೋಣ. ಹಿಂದುಸ್ತಾನದಲ್ಲಿಯ ಎಲ್ಲ ಪಕ್ಷಗಳು ವಿಶೇಷತಃ ಮುಸ್ಲಿಂಲೀಗಿನವರು ಈ ಭಾಷಣದಲ್ಲಿಯ ಮರ್ಮವನ್ನು ತಿಳಿದುಕೊಂಡು ಕಾರ್ಯಪ್ರವೃತ್ತರಾದರೆ ಹಿಂದುಸ್ತಾನಕ್ಕೆ ಬೇಗನೆ ಸ್ವಾತಂತ್ರ್ಯ ಸಿಕ್ಕುವಲ್ಲಿ ಸಂದೇಹವಿಲ್ಲ.

## ಟೀಕೆ--ಟಿಪ್ಪಣಿಗಳು

[೩ನೇ ಪುಟದಿಂದ ಮುಂದರಿದುದು]

ಶಾಂತಿಯ ಕೂಗು ಅಲ್ಲಿ ಕೇಳಬರುತ್ತದೆ. ಅಮೇರಿಕೆಯ ಅಧ್ಯಕ್ಷ ಟ್ರೂಮನ್‌ರು ಈ ಪರಿಷತ್ತಿನ ಪ್ರತಿನಿಧಿಗಳನ್ನು ಸ್ವಾಗತಿಸುತ್ತ ಜಾಗತಿಕ ಶಾಂತಿ ಸ್ಥಾಪನೆ ತಮ್ಮ ಧ್ಯೇಯವಾಗಿದ್ದು ಅಮೇರಿಕ ಸರಕಾರ ಇದಕ್ಕೆ ತುಂಬ ಸಹಾಯ ಮಾಡುವದು ಎಂದು ಆಶ್ವಾಸಿಸಿರುವರು. ಬ್ರಿಟಿಶ್ ಮುಖ್ಯ ಮಂತ್ರಿ ಅಟ್ಲಿ ಮತ್ತು ಹಿಂದಿನ ಮುಖ್ಯ ಮಂತ್ರಿ ಚರ್ಚಿಲ್ಲರು ಕಾಮನ್ಸ ಸಭೆಯಲ್ಲಿ ಮಾತಾಡುತ್ತ ಜಾಗತಿಕ ಶಾಂತಿಯೆ ತಮ ಧ್ಯೇಯವೆಂದು ಹೇಳಿರುವರು. ಯುದ್ಧದ ಅಂಜಿಕೆ ಬೇಡೆಂದೂ ಆಶ್ವಾಸನ ಕೊಟ್ಟಿರುವರು. ರಶಿಯ ಸರಕಾರದ ಘೋಷಣೆಯು ಇದೇ ಬಗೆಯದಾಗಿದೆ. ಹೀಗೆ ಪ್ರಬಲ ರಾಷ್ಟ್ರಗಳು ಆಶ್ವಾಸನ ಕೊಡುತಿದ್ದರೂ ಜಾಗತಿಕ ಶಾಂತಿ ಏಕೆ ಪ್ರಸ್ಥಾಪಿತವಾಗಲೊಲ್ಲದೆಂಬುದು ಮಹತ್ವದ ಸಮಸ್ಯೆಯಾಗಿದೆ. ಆಯಾ ರಾಷ್ಟ್ರಗಳ ಸ್ವಾರ್ಥ; ಸಾಮ್ರಾಜ್ಯತ್ವದ, ಸುಲಿಗೆ, ಎರಡನೆಯವರ ಮೇಲೆ ಪ್ರಭುತ್ವ ನಡೆಸುವ ಹಂಬಲವನ್ನು ಬಿಟ್ಟುಗೊಡುವ ವರೆಗೆ ಜಾಗತಿಕ ಶಾಂತಿ ಶಕ್ಯವಿಲ್ಲೆಂಬುದು ಸೂರ್ಯ ಪ್ರಕಾಶದಷ್ಟು ಸ್ಪಷ್ಟವಿದೆ.

## ಮಂಗಳೂರಲ್ಲಿ ಕ. ಲಕ್ಷ್ಮಿ.

ಅಜಾದ ಹಿಂದ ಸರಕಾರ ದಿನಾಚರಣೆಯ ಮೂರನೇ ವಾರ್ಷಿಕೋತ್ಸವ ೨೧ ನೇ ತಾರೀಕು ಸಾಯಂಕಾಲ ಮಂಗಳೂರಲ್ಲಿ ವಿಜೃಂಭಣೆಯಿಂದ ಆಚರಿಸಲ್ಪಟ್ಟಿತು. ಝಾಂಸಿರಾಣೀ ದಳದ ಕರ್ನಲ್ ಲಕ್ಷ್ಮೀಯವರು ಭಾಷಣಮಾಡಿದರು. ಅಜದ ಹಿಂದ ಸರಕಾರ ಯಾರಿಂದ ಎಲ್ಲಿ ಎಂದು ಸ್ಥಾಪಿತವಾಯಿತೆಂಬ ಬಗ್ಗೆ ಉಜ್ವಲ ಭಾಷಣಮಾಡಿದರು. ನೇತಾಜಿ ಸುಭಾಸಚಂದ್ರ ಬೋಸರು ಆಜಾದ ಹಿಂದ ಸರಕಾರವನ್ನು ಸ್ಥಾಪಿಸಿ ಅದರ ಅಂಗವಾಗಿ ಅಜಾದ ಹಿಂದ ಫೌಜ ರಚಿಸಿದರೆಂದೂ ಈ ದಳದಲ್ಲಿ ಕೆಲಸಮಾಡಲು ಅನೇಕ ಯೋಧರೂ ಮಹಿಳೆಯೂ ಹೇಗೆ ಮುಂದೆ ಬಂದರೆಂಬದನ್ನು ವಿವರಿಸಿದರು. ವಿದ್ಯಾರ್ಥಿ ಸಂಘದ ಉಪಾಧ್ಯಕ್ಷ ಶ್ರೀ ಮೆನನರು ಕರ್ನಲ್ ಲಕ್ಷ್ಮಿಯವರನ್ನು ಸ್ವಾಗತಿಸಿದರು. ಮೆರವಣಿಗೆಯಿಂದ ಸಭಾಸ್ಥಾನಕ್ಕೆ ಕರೆದೊಯ್ಯಲಾಯಿತು. ಕರ್ನಲ್ ಲಕ್ಷ್ಮಿಯವರು ಆಯ. ಎನ್. ಎ. ಪರಿಹಾರ ಬಗ್ಗೆ ಧನ ಸಂಗ್ರಹ ಮಾಡಿದರು. ಜೆಜೆಂಟ ಶಾಲೆಯಲ್ಲಿ ಭಾಷಣಮಾಡಿದರು. ಕೆನರಾ ಹೈಸ್ಕೂಲ ಆವಾರದಲ್ಲಿ ಮಾತಾಡುತ್ತ ಝಾಂಸಿರಾಣಿ ದಳ ಹೇಗೆ ಏರ್ಪಟ್ಟಿತು. ಅದು ಹೇಗೆ ಹೆಸರುವಾಸಿಯಾಯಿತು, ಎಂದು ಮುಂತಾಗಿ ಸಂಗತಿಗಳನ್ನು ಅಮೂಲಾಗ್ರ ತಿಳಿಸಿದರು. ಈ ಎಲ್ಲ ಕಾರ್ಯಗಳ ಯಶಸ್ಸಿಗೆ ನೇತಾಜಿ ಸುಭಾಸಚಂದ್ರಬೋಸರ ತ್ಯಾಗ ಧುರೀಣತೆಯೆ ಕಾರಣವೆಂದು ಹೇಳಿದರು.

ದಕ್ಷಿಣ ಕನ್ನಡ, ಮಲಬಾರ ಜಿಲ್ಹೆಗಳ ಬೀಡಿ ಕೆಲಸಗಾರರು ಸಂಪು ಹೂಡಿದ್ದು ೨೧ ನೇ ತಾರೀಕು ಗಣೇಶ ಬೀಡಿ ಕಾರಖಾನೆಯ ಮುಂಗಡೆಯಲ್ಲಿ ಆರು ಕೆಲಸಗಾರರು ಸೆರೆಹಿಡಿಯಲ್ಪಟ್ಟರು ಅವರಿಗೆ ತಲಾ ೨॥ ತಿಂಗಳು ಸಾದಾಶಿಕ್ಷೆ ವಿಧಿಸಲಾಗಿದೆ. ಕಣ್ಣಾನೂರಿನಲ್ಲಿ ಹದಿಮೂರು ಮಂದಿಯನ್ನು ತಲಚೇರಿಯಲ್ಲಿ ಇಬ್ಬರನ್ನು ಸೆರೆಹಿಡಿದರು. ಇವರನ್ನು ಆರೂವರೆ ತಿಂಗಳು ಕಠಿನ ಸಜೆಗೆ ಗುರಿಪಡಿಸಲಾಗಿದೆಂದು ತಿಳಿಯುತ್ತದೆ.

ಇದೇ ತಿಂಗಳು ೭ ನೇ ತಾರೀಕಿನಂದು ಮದ್ರಾಸ ಗವರ್ನರರು ಮಂಗಳೂರು ಸಂದರ್ಶಿಸಿದ ಕಾಲಕ್ಕೆ ಮಂಗಳೂರಿನ ಕಮ್ಯೂನಿಸ್ಟ ಪಕ್ಷ ರೈತ ಸಂಘ ಮತ್ತು ಕೂಲಿಕಾರ ಸಂಘಗಳ ನೇತೃತ್ವದಲ್ಲಿ ಹಂಚು. ಬೀಡಿ ಮುಂತಾದ ಉದ್ಯೋಗಗಳ ಕೆಲಸಗಾರರು ಹರತಾಳಆಚರಿಸಿ ರೇಶನ್ ಕಡಿತಕ್ಕೆ ತಮ್ಮ ವಿರೋಧ ಮಾಡಿದರು. ಆಗ ಅವರ ಧುರೀಣರು ಸೆರೆಹಿಡಿಯಲ್ಪಟ್ಟರು. ಇದನ್ನು ವಿರೋಧಿಸಿ ಕೆಲಸಗಾರರು ಸಂಪು ಹೂಡಿದರು. ಸೆರೆಹಿಡಿಯಲ್ಪಟ್ಟವರ ಬಿಡುಗಡೆ ಮಾಡಲಾಯಿತು ಈಗ ಅವರ ಮೇಲೆ ಖಟ್ಲೆ ಹಾಕಲಾಗಿದ್ದು ೨೪ ಕ್ಕೆ ಖಟ್ಲೆ ಪ್ರಾರಂಭವಾಗಿ ನವಂಬರ ೩ ಕ್ಕೆ ಮುಂದೆ ಬಿದ್ದಿದೆ.

ದಕ್ಷಿಣ ಕನ್ನಡ ಜಿಲ್ಹಾ ಗ್ರಾಮೋದ್ಧಾರ ಸಂಘದವರು ಜಿಲ್ಹಾ ಲೋಕಲ್ ಬೋರ್ಡ ಚುನಾವಣೆ ಹೋರಾಡಲು ನಿರ್ಧರಿಸಿ ಆ ಬಗ್ಗೆ ಚುನಾವಣೆ ಮಂಡಳವನ್ನು ನಿಯಮಿಸಿರುವರು. ಈ ಸಂಘದ ಪರವಾಗಿ ಉಮೇದ್ವಾರರಾಗಬಯಸುವವರು ೫-೧೧-೪೬ ರೊಳಗಾಗಿ ೨೫ ರೂಪಾಯಿ ಸಹಿತ ಅರ್ಜಿ ಹಾಕಬೇಕೆಂದು ಎಂ. ಎಸ್. ಅಧಿಕಾರಿಗಳು ಪ್ರಕಟಿಸುತ್ತಾರೆ.

ಮೈಸೂರು ಸರಕಾರದವರು ಬ್ರಿಟನ್‌ದಲ್ಲಿ ೫ ಲಕ್ಷ ಪೌಂಡು ಬೆಲೆ ಬಾಳುವ ( ೬೦ ಲಕ್ಷ ರೂಗಳು ) ಯಂತ್ರೋಪಕರಣಗಳನ್ನು ಕೊಳ್ಳಲಿರುವರು. ಸಿಮೆಂಟ ಕಾರಖಾನೆ ಇಲೆಕ್ಟ್ರಿಕ್ ವಿಗ್, ಅಯರ್ನಫರನೇಸ ಮತ್ತು ಅಸೆಟಿಕ್ ಆಸಿಡ್ ಕಾರಖಾನೆಗಳಿಗೆ ಅವಶ್ಯವಿರುವ ಯಂತ್ರ ಸಾಮುಗ್ರಿಗಳು ಇದರಲ್ಲಿವೆ.






### ಮುಂಬಯಿ ಶೇರಪೇಟೆ

ಮುಂಬಯಿ ತಾ ೨೯

ಇಂದು ಪೇಟೆ ಇಳಿಮುಖವಾಗಿ ಪ್ರಾರಂಭವಾಯಿತು. ಟಾಟಾ ಡೆಫರ್ಡ ಶೇರಿನ ಧಾರಣ ೨೮೮೦ ಕ್ಕೆ ಪ್ರಾರಂಭವಾಯಿತು. ನಿನ್ನೆ ದಿನ ೨೮೮೭ ಕ್ಕೆ ಮುಚ್ಚಿದ್ದವು. ವ್ಯಾಪಾರವಾದರೂ ಅಷ್ಟೊಂದು ಭರದಿಂದ ಸಾಗಲಿಲ್ಲ. ಧಾರಣೆ ೨೮೬೦ ಕ್ಕಿಳಿದು ಮುಂದೆ ೨೮೮೦ ಕ್ಕೇರಿತು. ಆರ್ಡಿನರಿ ಪಾಲುಗಳು ೫೨೪ ದಿಂದ ಪ್ರಾರಂಭವಾಗಿ ೫೨೫ ಕ್ಕೇರಿ ಮತ್ತೆ ೫೨೨ ಕ್ಕಿಳಿದವು. ಬಾಂಬೆ ಡಾಯಿಂಗ ೨೯೬೫ ಕ್ಕೆ ಸುರುವಾಗಿ ೨೯೬೦ ಕ್ಕಿಳಿಯಿತು. ಆದರೆ ಮುಂದೆ ೨೯೯೨—೮—೦ ಕ್ಕೇರಿದವು. ಕೊಹಿನೂರ ಗಿರಣಿ ಧಾರಣೆ ೯೬೫ ಕ್ಕೆ ಸುರುವಾಗಿ ೯೭೨ ರ ವರೆಗೇರಿದವು. ಆದರೆ ಮುಂದೆ ೯೬೧ ಕ್ಕಿಳಿದವು. ಅನಂತರ ವ್ಯಾಪಾರ ಹಿಡಿತದಿಂದ ನಡೆಯಿತು. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೨೮೮೦ ಕ್ಕೆ ಮತ್ತು ಆರ್ಡಿನರಿ ಪಾಲುಗಳು ೫೨೩ ಕ್ಕೆ ಬಂದವು. ಸಿಂಪ್ಲೆಕ್ಸ ಗಿರಣಿ ಪಾಲು ೪೪೦ ಕ್ಕಿದ್ದವು. ಆಂಧ್ರ ಪಾಲುಗಳು ೧೯೩೨-೮-೦ ಏರಿದವು. ಬ್ಯಾಂಕ ಪಾಲುಗಳು ಸ್ಥಿರವಾಗಿದ್ದವು. ಬಡೋದೆ ೨೦೦, ಸೆಂಟ್ರಲ್ ೧೩೩, ಅಸೋಸಿಯೆಟೆಡ್ ಸಿಮೆಂಟ್ಸ ೨೪೩, ಮತ್ತು ಅಶೋಕ ೬೫೦, ಹೇಳಲ್ಪಡುತಿದ್ದವು. ಸಿಂದ್ಯ ಪಾಲುಗಳು ೪೮-೪-೦ ಕ್ಕೆ ನಿಂತವು. ಇಳಿ ಮುಖದಲ್ಲಿ ಪೇಟಿ ಸ್ಥಿರವಾಗಿದ್ದಿತು.

ಅರಳೆ ಗಿರಣಿ ಪಾಲುಗಳು ಈ ರೀತಿಯಾಗಿ ಮಾರಾಟಾದವು. ಬಾಂಬೆ ಡಾಯಿಂಗ ೧೨೮೦ ರಿಂದ ಪ್ರಾರಂಭವಾಯಿತು. ನಾಗಪೂರ ೪೨೨, ಸ್ವದೇಶಿ ೭೬೦, ನ್ಯೂ ಗ್ರೇಟ ೫೭೦, ಸಿಂಪ್ಲೆಕ್ಸ ೪೪೦, ಕೊಹಿನೂರ ೯೫೯, ಕುಲಾಬಾ ೪೯೬, ಗೋಕಾಕ ಎಕ್ಸಡಿ ೪೦೪, ಪೋನಿಕ್ಸ ೧೨೬೫ ಮೈಸೂರು ೩೬೦—೧೦—೦ ಇಂಡಿಯನ ಬ್ಲೀಚಿಂಗ ೨೧೬ ಸ್ವಾನ ೪೫೩, ಫಿನ್ಲೆ ೪೨೮ ಮುರಾರಜಿ ೮೭೦, ಇಂದೂರ ೭೮೮—೮—೦ ಈ ರೀತಿ ಧಾರಣೆಗಳಿದ್ದವು.

ಟಾಟಾ ಸ್ಟೀಲಡೆಫರ್ಡ ೨೯-೩-೯ ಎಕ್ಸ ಡಿ ೨೮೮೦ ಟಾಟಾ ಸ್ಟೀಲ ಆರ್ಡಿನರಿ ೩೮ ಎಕ್ಸಡಿ ೫೨೮— ವಿದ್ಯುತ್ ಪಾಲುಗಳು ಟಾಟಾ ಹೈಡ್ರೊ ೨೧೮, ಅಂಧ್ರ ವ್ಯಾಲಿ ಎಕ್ಸ ಡಿ ೧೯೩೨-೮-೦ ಟಾಟಾ ಪಾವರ ಎಕ್ಸ ಡಿ ೧೯೯೦ ಟ್ರಾಮ ಎಕ್ಸ ಡಿ ೧೨೯-೪-೦

### ಬ್ಯಾಂಕು

ರಿಜರ್ವ ೧೫೭-೮-೦ ಇಂಪೀರಿಯಲ್ ೨೮೮೦, ಸೆಂಟ್ರಲ್ ೧೩೩ ನ್ಯಾಶನಲ್, ಸೆವಿಂಗ್ಸ (ಪೂರ್ಣ ಕೊಟ್ಟದ್ದು) ೯೨ (ಅರ್ಧ) ೫೪—೮—೦

### ಬೆಳ್ಳಿ—ಚಿನ್ನ

ಲಂಡನ ವ್ಯಾಪಾರಸ್ಥರು ಸ್ಥಳಿಕ ವ್ಯಾಪಾರಸ್ಥರಿಗೆ ಬೆಳ್ಳಿ ಕೊಡುತಿರುವರೆಂಬ ಸುದ್ದಿ ಬಂದದ್ದರಿಂದ ಮಾರಾಟ ಹೆಚ್ಚಾಗಿ ಚಿನ್ನದ ಪೇಟಿ ಸ್ಥಿರವಾಗಿದ್ದಿತು. ಪೇಟೆಯಲ್ಲಿ ಬಂಗಾರದ ಸಂಗ್ರಹ ೪೦೦೦ ತೊಲಿ, ಮತ್ತು ಬೆಳ್ಳಿ ಸಂಗ್ರಹ ೩೦೦೦ ಗಟ್ಟಿಯಿದ್ದಿತು. ವಾಯದೆ ಬೆಳ್ಳಿ ಇಂದು ೧೪೯ ರಿಂದ ಪ್ರಾರಂಭವಾಗಿ ೧೪೭—೮—೦ ಕ್ಕಿಳಿಯಿತು. ಆದರೆ ಮುಂದೆ ೧೪೮—೧೦—೦ ಕ್ಕೇರಿತು. ಹಜರ ಬೆಳ್ಳಿ ೧೬೦—೮—೦ ಇದ್ದಿತು. ಬಂಗಾರ ೮೮—೧೨—೦ ರಿಂದ ಪ್ರಾರಂಭವಾಗಿ ೮೭—೧೪—೦ ಕ್ಕಿಳಿದು ಮುಂದೆ ೮೮—೮—೦ ಕ್ಕೇರಿತು. ಬಂಗಾರ ಹಜರ ೯೯—೮—೦ ಮತ್ತು ಸಾವರಿನ ೬೮—೧೦—೦ ಇಂದಿನ ಪೇಟಿ ಮುಚ್ಚುವಾಗ ಬೆಳ್ಳಿ ಹಜರ ೧೬೦—೦—೦ ವಾಯಿದೆ ೧೪೮—೪—೦ ಬಂಗಾರ ಹಜರ ೯೯—೪—೦ ಬಂಗಾರ ವಾಯಿದೆ ೮೮—೬—೦

### ಅರಳೆ

ಅರಳೆ ಪೇಟೆ ಇಂದು ಸ್ಥಿರವಾಗಿದ್ದಿತು. ಮುಚ್ಚುವಾಗ ಅಯ. ಸಿ. ಜಾನೇ. ೪೫೬-೦ ಅಯ ಸಿ ಸಿ ಮಾರ್ಚಿ ೪೬೩-೪-೦ ಅಯ ಸಿ ಸಿ ಮೇ. ೪೭೦-೪-೦.

### ಎಣ್ಣೆಕಾಳು

| | |
|---|---|
| ಶೇಂಗಾ | ೧೧೪-೦-೦ |
| ಅಗಸಿ | ೨೫-೨-೦ |
| ಅಗಸಿ ಎಣ್ಣೆ | ೧೫-೨-೦ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ ರೂ. | | ೧೪-೧೬ |
| ಅರಿಷಣ ಹೇರು | | ೯೩-೯೫ |
| ಶೇಂಗಾ ಖಂಡಿ | ,, | ೯೬-೧೦೦ |
| ಮೆಣಸಿನಕಾಯಿ ಹೇರು | ,, | ೧೧೦-೧೬೦ |
| ಮಿರ್ಜಿ ತಂಬಾಕು ಹೇರು | | ೧೦೦-೨೦೦ |
| ತಂಬಾಕ ಪಂಢರಪುರಿ | ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | | ೨೫೦-೩೭೫ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ಮಣ ೧ಕ್ಕೆ | ೩೫-೩೭॥ |
| ,, ,, ೨ | ೩೩-[illegible] |
| ರಾಜಾ ಅಲವು | ೩೨-[illegible] |
| ಬೆಟ್ಟ | ೨೩-೨೫ |
| ಬೆಟ್ಟ ವಂತಿ | ೨೫-೨೬॥ |
| ಸುಲಿ | ೩೫-೩೭॥ |

ಅಡಿಕೆಗೆ ಗಿರಾಕಿಯಿದೆ. ಕಡೂರ ಕಡೆಯಿಂದ ಹೊಸ ಅಡಿಕೆ ತೊರಸಾಲು ಪೇಟೆಗೆ ಬರುತ್ತಿದೆ.

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೫-೩೦೦ |
| ,, | ನಂ. ೨ | ೨೮೫-೨೯೦ |
| ,, | ನಂ. ೩ | ೨೭೫-೨೮೦ |
| ಅಪ್ಲಂಡ ಹತ್ತಿ | | ೨೬೦-೨೯೦ |
| ಜಿನ | | ೨೦೦-೨೨೦ |
| ಸಾಜಿನ | | ೨೦೦-೨೦೫ |
| ಡಬಲರೋಲ | | ೧೯೫-೨೦೦ |

ಮೈಸೂರು ನಗರಸಭೆಯ ಚುನಾವಣೆಗಾಗಿ ಕಾಂಗ್ರೆಸ ಹುರಿಯಾಳುಗಳು ನಾಮಪತ್ರ ಕೊಟ್ಟಿದ್ದಾರೆ. ಆದರೆ ನಗರ ಸಭೆಯ ಈ ಚುನಾವಣೆಯಲ್ಲಿ ಭಾಗವಹಿಸಬಾರದೆಂದು ಮೈಸೂರು ಕಾಂಗ್ರೆಸ ಕಾರ್ಯಕರ್ತರು ತಮ್ಮ ಸಭೆಯಲ್ಲಿ ನಿರ್ಧರಿಸಿದ್ದಾರೆ.





# ಮಲೇರಿಯಾ ನಿವಾರಣೆ

## ಮುಂಬಯಿ ಸರಕಾರದ ಯೋಜನೆ

### ಮುಖ್ಯ ಮಂತ್ರಿಗಳಿಂದ ಪ್ರಾರಂಭೋತ್ಸವ

ಮುಂಬಯಿ ಸರಕಾರದವರು ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಹೆಗಳಲ್ಲಿಯ ಮಲೇರಿಯಾವನ್ನು ನಿಯಂತ್ರಿಸುವದಕ್ಕಾಗಿ ಗ್ರಾಮಾಂತರ ವ್ಯಾಪಕ ಯೋಜನೆಯನ್ನು ಕೈಕೊಂಡಿದ್ದಾರೆ ಈ ಯೋಜನೆಯ ಉದ್ಘಾಟನ ಸಮಾರಂಭವನ್ನು ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀಮಾನ್ ಬಾಳಾಸಾಹೇಬ ಖೇರರು ಆರೋಗ್ಯ ಮಂತ್ರಿಗಳಾದ ಶ್ರೀ ಎಂ. ಡಿ. ಡಿ. ಗಿಲ್ಡರರೊಡಗೂಡಿ ಬಂದು ಧಾರವಾಡದಲ್ಲಿ ಇದೇ ಸಪ್ಟಂಬರ ೨೮ ನೇ ತಾರೀಖು ಜರುಗಿಸಿದರು. ಇದಕ್ಕಾಗಿ ಮುನಸಿಪಾಲಟಿಯಲ್ಲಿ ಸಾರ್ವಜನಿಕ ಸಭೆ ಜರುಗಿ ಸರಕಾರದ ಉದ್ದೇಶ, ಯೋಜನೆಯ ವಿವರಗಳನ್ನು ತಿಳಿಸಿ ಹೇಳಲಾಯಿತು. ಈ ಯೋಜನೆಯ ವೆಚ್ಚ ಪ್ರತಿವರ್ಷ ೪ ಲಕ್ಷ ರೂ. ಬರುವದು. ಸದ್ಯಕ್ಕೆ ೫ ವರ್ಷಗಳ ವರೆಗೆ ಈ ಯೋಜನೆಯ ವೆಚ್ಚಕ್ಕೆ ಒಪ್ಪಿಗೆ ಕೊಡಲಾಗಿದೆ. ಈ ಅವಧಿಯಲ್ಲಿ ಈ ಯೋಜನೆ ಎಷ್ಟರ ವರೆಗೆ ಯಶಸ್ವಿಯಾಯಿತೆಂಬುದನ್ನು ಸೂಕ್ಷ್ಮ ರೀತಿಯಿಂದ ಪರೀಕ್ಷಿಸಲಾಗುವದು. ಈ ಎರಡು ಜಿಲ್ಹೆಗಳಲ್ಲಿ ಕಾಯಂವಾಗಿ ಈ ಯೋಜನೆಯನ್ನು ಕೈಕೊಳ್ಳುವ ಸಂಬಂಧದಲ್ಲಿ ಮತ್ತು ಉಳಿದ ಜಿಲ್ಹೆಗಳಲ್ಲಿಯೂ ಇದನ್ನು ಜಾರಿಯಲ್ಲಿ ತರುವ ಸಂಬಂಧದಲ್ಲಿ ಈ ಐದು ವರ್ಷಗಳ ಅನುಭವ ಒಳ್ಳೆ ಸಹಾಯಕವಾಗುವುದು. ಮತ್ತು ಅಗಲೆ ಮುಂದಿನ ಕಾರ್ಯಕ್ರಮವನ್ನು ಗೊತ್ತುಪಡಿಸಲಾಗುವದು.



ಮುಖ್ಯಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರು ಡಿ. ಡಿ. ಟಿ. ಸೇಚನವನ್ನು ಪ್ರಾರಂಭಿಸುತ್ತಿರುವರು

### ಮಹಾತ್ಮರ ಶುಭಾಶೀರ್ವಾದ

ಮುಖ್ಯಮಂತ್ರಿಗಳು ಸಾರ್ವಜನಿಕರನ್ನುದ್ದೇಶಿಸಿ ಭಾಷಣ ಮಾಡುತ್ತ ಸರಕಾರದ ಈ ಯೋಜನೆಯನ್ನು ಯಶಸ್ವಿಮಾಡಲು ಸರ್ವರೀತಿಯಿಂದ ಸಹಕರಿಸಬೇಕಾಗಿ ಬಿನ್ನವಿಸಿಕೊಂಡರು. ಮಲೇರಿಯಾ ನಿವಾರಣೆಗಾಗಿ ಎಲ್ಲರೂ ಈ ಯೋಜನೆಯ ಸಂಪೂರ್ಣ ಲಾಭ ಪಡೆಯಬೇಕೆಂದು ಹೇಳಿ ಮಹಾತ್ಮಾ ಗಾಂಧಿಯವರಿಂದ ಈ ಸಂಬಂಧದಲ್ಲಿ ಬಂದ ಶುಭ ಸಂದೇಶವನ್ನು ತಿಳಿಸಿದರು. ಅದು ಇಂತಿದೆ—

ಮಂತ್ರಿವರ್ಯ ಡಾ. ಗಿಲ್ಡರ, ಪುಣೆ—

ಮಲೇರಿಯಾದ ನಿವಾರಣೆಗಾಗಿ ಕೈಕೊಂಡ ಯಶಸ್ವೀ ಯೋಜನೆಗಾಗಿ ಡಾ. ವಿಶ್ವನಾಥನ್‌ರಿಗೆ ಅಭಿನಂದನೆಗಳನ್ನರುಹಿರಿ"

ಹೊಸದಿಲ್ಲಿ     ಗಾಂಧಿ

೨೭-೮-೧೯೪೬

### ಪ್ರಥಮ ಯೋಜನೆ

ಈ ಯೋಜನೆ ೬೦೦೦ ಚದುರುಮೈಲು ಪ್ರದೇಶದಲ್ಲಿ ಕೈಕೊಳ್ಳಲ್ಪಡುವದು. ಇದರಲ್ಲಿ ೧೨೦೦ ಹಳ್ಳಿಗಳು ಅಡಕವಾಗುವವು. ೧೫ ಲಕ್ಷ ಜನರಿಗೆ ಇದರ ಲಾಭ ಸಿಕ್ಕುವದು. ಪ್ರತಿಯೊಂದು ಹಳ್ಳಿಯಲ್ಲಿಯೂ ಮನೆಗಳನ್ನು ಈ ಡಿ. ಡಿ. ಟಿ. ಯಿಂದ ನಿಯಮಿತವಾಗಿ ಸೇಚನಮಾಡಿ ವಿಶುದ್ಧಗೊಳಿಸಲಾಗುವದು. ಈ ಡಿ. ಡಿ. ಟಿ. ಮಲೇರಿಯಾ ನಿವಾರಣೆಗಾಗಿ ರಾಮಬಾಣದಂತಿದೆ. ಮಲೇರಿಯಾ ಹಿಡುಗಿನ ಕಾಲದಲ್ಲಿ ೬ ವಾರಗಳಿಂದ ೨ತಿಂಗಳುಗಳಿಗೊಂದು ಸಲದಂತೆ ಈ ರೀತಿ ಎಲ್ಲ ಮನೆಗಳನ್ನು ಪರಿಶುದ್ಧಗೊಳಿಸಲಾಗುವದು.

### ಮಲೇರಿಯಾದಿಂದಾಗುವ ಹಾನಿ

ಮುಂಬಯಿ ಪ್ರಾಂತದಲ್ಲಿ ಪ್ರತಿವರ್ಷ ೫೦ ಲಕ್ಷ ಜನ ಈ ಬೇನೆಯಿಂದ ಬಳಲುತ್ತಿರುವರು ಮತ್ತು ೫೦ ಸಾವಿರದಷ್ಟು ಜನ ಇದೆ ಬೇನೆಗೆ ಆಹುತಿಯಾಗುತಿರುವರು. ಅಲ್ಲದೆ ಇದರ ಅಪ್ರತ್ಯಕ್ಷ ಪರಿಣಾಮದಿಂದ ಇದಕ್ಕೂ ಹೆಚ್ಚು ಜನ ಸಾಯುತಿರುವರು. ಮಕ್ಕಳು ಸುಲಭವಾಗಿ ಈ ಬೇನೆಗೆ ಆಹುತಿಯಾಗುವರು. ಬೇನೆಯಿಂದ ಪಾರಾದವರೂ ಕಾಯಂವಾಗಿ ಅದರ ಪರಿಣಾಮವನ್ನನುಭವಿಸಬೇಕಾಗುವದು. ಅವರ ದೈಹಿಕ ಶಕ್ತಿಯೆ ಕುಂದಿ ಹೋಗುವದು. ಒಳ್ಳೆ ಫಲವತ್ತಾದ ಪ್ರದೇಶಗಳಲ್ಲಿಯೇ ಸಾಮಾನ್ಯವಾಗಿ ಈ ಬೇನೆ ಹಬ್ಬುವದರಿಂದ ರಾಷ್ಟ್ರದ ನೈಸರ್ಗಿಕ ಸಂಪತ್ತುಗಳ ಸಂಪೂರ್ಣ ಉಪಯೋಗ ಮಾಡಿಕೊಳ್ಳುವದು ಶಕ್ಯವಾಗುವದಿಲ್ಲ. ಇದರಿಂದ ಹಳ್ಳಿ ನಿರ್ಜನ ಪ್ರದೇಶವಾಗುವುದು. ಜನಸಂಖ್ಯೆ ಕಡಿಮೆಯಾಗುತ್ತ ನಡೆಯುವದು ಮತ್ತು ಫಲವತ್ತಾದ ಭೂಮಿಗಳು ಪಡಬೀಳುವವು.

೧೯೪೫-೪೬ ರಲ್ಲಿ ಶಿರಸಿ ತಾಲೂಕಿನ ೫೦ ಹಳ್ಳಿಗಳಲ್ಲಿ ಈ ಡಿ. ಡಿ. ಟಿ. ಸೇಚನದ ಪ್ರಯೋಗಮಾಡಿ ಅನುಭವ ಪಡೆಯಲಾಯಿತು. ತುಲನೆ ಮಾಡಿ ನೋಡುವದಕ್ಕಾಗಿ ೩೦ ಹಳ್ಳಿಗಳನ್ನು ಹಾಗೆಯೇ ಇಡಲಾಯಿತು. ಡಿ. ಡಿ. ಟಿ. ಪ್ರಯೋಗದ ಹಳ್ಳಿಗಳಲ್ಲೆಲ್ಲ ಒಂದು ವರ್ಷದ ಕೆಳಗಿನ ಮಕ್ಕಳಲ್ಲಿ ಮಲೇರಿಯಾ ಬಾಧೆ ಕೇವಲ ನೂರಕ್ಕೆ ೩ ರಷ್ಟಿದ್ದಿತು. ಈ ರೀತಿ ಪ್ರಯೋಗ ಯಶಸ್ವಿಯಾದ್ದರಿಂದ ಉಳಿದ ಹಳ್ಳಿಗಳಲ್ಲಿಯೂ ಇದರ ಪ್ರಯೋಗವನ್ನು ಮಾಡಿ ನೋಡಬೇಕೆಂದು ಸಧ್ಯದ ಯೋಜನೆಯನ್ನು ಜಾರಿಯಲ್ಲಿ ತರಬಯಸಿ ಮುಖ್ಯ ಮಂತ್ರಿಗಳು ಅದರ ಪ್ರಾರಂಭೋತ್ಸವನನ್ನು ಜರುಗಿಸಿದರು. ಇದೀಗ ಪ್ರಾಂತದಲ್ಲಿ ಲೋಕಪ್ರಿಯ ಸರಕಾರವಿದೆ. ಜನತೆಯು ಹೊಣೆಗಾರಿಕೆಯಿಂದ ಸಹಕರಿಸಿದ್ದಾದರೆ ಉತ್ಸಾಹೀ ಕಾರ್ಯಕರ್ತರು ಕೆಲಸ ಮಾಡಿದ್ದಾದರೆ ಇದರಲ್ಲಿ ಒಳ್ಳೆ ಪರಿಣಾಮ ಕಂಡು ಬರಬಹುದು. ಈ ಪ್ರಯೋಗ ಯಶಸ್ವಿಯಾದುದಾದರೆ ಉಳಿದ ಕಡೆಗಳಲ್ಲಿಯೂ ಇದನ್ನು ಜಾರಿಯಲ್ಲಿ ತರಲಾಗುವದು. ಮಲೇರಿಯಾವನ್ನು ನಿಯಂತ್ರಿಸುವದೆಂದರೆ ರಾಷ್ಟ್ರದ ಸೇವೆ ಮಾಡಿದಂತೆ ಎಂದು ಮಹಾತ್ಮಾ ಗಾಂಧಿಯವರು ಹೇಳುತಿರುವರು; ರಾಷ್ಟ್ರದ ಆರೋಗ್ಯವೇ ರಾಷ್ಟ್ರ ಸಂಪತ್ತಾಗಿರುವುದರಿಂದ ಆ ಆರೋಗ್ಯ ರಕ್ಷಣೆಗಾಗಿ ಎಷ್ಟು ಹಣ ವೆಚ್ಚ ಮಾಡಿದರೂ ಕಡಿಮೆಯೇ.

೧೮೯೧ ರಿಂದ ೧೯೪೧ ರ ವರೆಗಿನ ಜನಸಂಖ್ಯೆ




ಮೇಲಿನ ಸಾಲು— ಮಲೇರಿಯಾ ಇಲ್ಲದ ಪ್ರದೇಶದಲ್ಲಿ ಜನಸಂಖ್ಯೆ ಹೆಚ್ಚುತ್ತ ನಡೆದಿದೆ—

ಕೆಳಗಿನ ಸಾಲು— ಮಲೇರಿಯಾ ಪ್ರದೇಶದಲ್ಲಿ ಜನಸಂಖ್ಯೆ ಕಡಿಮೆಯಾಗುತ್ತ ನಡೆದದ್ದು....

Reg. No. B. 3148

LICENCE No 3
Licenced to Post without Prepaymeut

KARMAVEER 4-11-46




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ನವಂಬರ ೪ ರಿಂದ ೧೦ ರ ವರೆಗೆ

## ಮೇಷ

ಸ್ವತಃಕ್ಕೆ ಮತ್ತು ಹೆಂಡತಿಗೆ ಕಿರುಕುಳ ಕಾಯಿಲೆ ಇದ್ದುದೇ. ಅಲ್ಲದೆ ಬಂದ ಅತಿಥಿಗಳಲ್ಲಿ ಒಬ್ಬರಿಗೆ ಕಾಯಿಲೆ ಇಲ್ಲವೆ ಅಪಘಾತದ ಅಂಜಿಕೆ. ಮತ್ತು ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಪ್ರತಿಷ್ಠೆ ಬೆಳೆಯುವದು. ಆದರೆ ಲಾಭ ಕುಂದುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಆದರೆ ಉಳಿದ ಎಲ್ಲ ಸರಕಾರಿ ಕೆಲಸಗಳಲ್ಲಿ ಯಶಸ್ಸು ಇಲ್ಲವೆ ಅನುಕೂಲತೆ. ಮಿತ್ರತ್ವದಲ್ಲಿ ವಿರೋಧ. ಸ್ವಲ್ಪ ಅಪಚಿತ ಲಾಭದ ಸಂಭವ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ ನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೪, ೫, ೮, ೯ ಅನುಕೂಲ.

## ವೃಷಭ

ನಿಮ್ಮ ಪ್ರಕೃತಿ ಸಾಧಾರಣವೆ. ಆದರೆ ಹೆಂಡತಿ ಮತ್ತು ಮಕ್ಕಳದು ಉತ್ತಮ. ತಾಯಿಯು ಇಲ್ಲವೆ ತದ್ವತ್ ವ್ಯಕ್ತಿಯ ಆರೋಗ್ಯಬಹಳ ಕೆಡುವದು ಪ್ರಾಪಂಚಿಕ ಸುಖ ಅಷ್ಟಕಷ್ಟೇ. ಆಪ್ತರು ಮತ್ತು ನೆರೆಹೊಯವರಿಂದ ಮೇಲಿಂದಮೇಲೆ ನಿಂದೆ ಮತ್ತು ಕುಚೇಷ್ಟೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ ಆದರೆ ಲಾಭ ಕುಂದುತ್ತಲೆ ನಡೆಯುವದು. ಮಿತ್ರತ್ವದಲ್ಲಿ ಬಹಳ ವಿರೋಧ. ಯಾವದೇ ಕೆಲಸದಲ್ಲಿ ಆತ್ಮವಿಶ್ವಾಸದ ಅಭಾವದಲ್ಲಿ ಹಾಸ್ಯಾಸ್ಪದ ಗೊಂದಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಆದರೆ ಶತ್ರುಗಳ ಜೋರು ಹೆಚ್ಚುವದು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ. ರೋಹಿಣಿಯ ಕೊನೆಯ ಮೃಗದ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೪-೫-೧೦ ಅನುಕೂಲ.

## ಮಿಥುನ

ಸ್ವತಃ ಮತ್ತು ತಾಯಿಯು ಇಲ್ಲವೆ ತತ್ಸಮ ವ್ಯಕ್ತಿಯ ಪ್ರಕೃತಿ ಬಹಳ ಕೆಡುವದು. ನಿಮ್ಮ ಮಕ್ಕಳಲ್ಲಿಯೂ ಒಬ್ಬರಿಗೆ ಕ್ಲೇಶವಿದ್ದುದೆ. ಆದರೆ ಹೆಂಡತಿಯ ಆರೋಗ್ಯ ಉತ್ತಮ ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣವೆ ವಾದದಲ್ಲಿ ಮತ್ತು ಸ್ಪರ್ಧೆಯುಲ್ಲಿ ಬಹಳ ಅನುಕೂಲತೆ ಮನಸಿಗೆ ಹುರುಹುರು ಎನಿಸುವಂತೆ ಮಿತ್ರತ್ವದಲ್ಲಿ ವಿರೋಧ. ಪರಸ್ತ್ರೀ ಬಗ್ಗೆ ಪಾಪಹೇತು, ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಆರಿದ್ರೆಯ ಕೊನೆಯ ೩ ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಹೆಚ್ಚು ತಾ ೪-೫-೬-೭ ಅನುಕೂಲ.

## ಕರ್ಕ

ಪ್ರಕೃತಿಗೆ ಬಹಳ ಕ್ಲೇಶ- ಸ್ತ್ರೀ ಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಒಬ್ಬರೊಬ್ಬರ ಮೇಲೆ ಗ್ರಾಮ್ಯ ಶಬ್ದಗಳ ಹೂಡ-ಪುಷ್ಪಾಂಜಲಿ. ಮಕ್ಕಳಲ್ಲಿ ಒಬ್ಬರ ಬಹಳ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಯೂ ಸಾಧಾರಣವೆ. ಆದರೆ ಲಾಭ ಅನುಕೂಲ ಮಿತ್ರಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಸ್ವಪ್ನಗಳು ಭಾವೀ ಸೂಚಕ ಪೂಜ್ಯ ವ್ಯಕ್ತಿಗಳ ಭೆಟ್ಟಿಯೋಗ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರ ವ್ಯವಹಾರ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ ೬-೭-೭-೯ ಅನುಕೂಲ.

## ಸಿಂಹ

ಪ್ರಕೃತಿ ಸಾಧಾರಣವೆ. ಅದರಂತೆ ಹೆಂಡತಿಯದು. ಆದರೆ ಉಭಯತರಲ್ಲಿ ಐಕ್ಯವಾಗಿ ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ ಆಪ್ತರಲ್ಲಿ ಕೆಲ ಜನರಿಂದ ಬಹಳ ಗೌರವ. ಆದರೆ ಕೆಲ ಜನರಿಂ ಅಷ್ಟೇ ಉಪಹಾಸ. ಮನೆಯಲ್ಲಿಯ ಜನರಿಂದ ಹಿತದ ಆದರೆ ಉಪಮರ್ದಕಾರಕ ಕೃತ್ಯಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾಷಾಢದ ೧ ನೇ ಚರಣಕ್ಕೆ ಹೆಚ್ಚು ತೊಂದರೆ.

## ಕನ್ಯಾ

ಪ್ರಕೃತಿ ಉತ್ತಮ. ಎಲ್ಲಬಗೆಯ ಪ್ರಾಪಂಚಿಕ ಸುಖ ವ್ಯವಸ್ಥಿತ ಮತ್ತು ಪ್ರಿಯ ಜನರ ಸಹವಾಸ ಸ್ಥಾವರದಲ್ಲಿ ಹೊಸ ಹೆಚ್ಚಳ ಇಲ್ಲವೆ ಕೆಲ ಅನುಕೂಲ ಘಟನೆಗಳು ಮಕ್ಕಳಲ್ಲಿ ಉನ್ನತಿ. ಕೆಲ ಧಾರ್ಮಿಕ ಇಲ್ಲವೆಮಂಗಳದಾಯಕ ಸಂಗತಿಗಳು ಉದ್ಯೋಗದಲ್ಲಿ ಲಾಭ ಉತ್ತಮ ಆದರೆ ವೆಚ್ಚವೂ ವಿಪರೀತ. ಮಿತ್ರತ್ವದಲ್ಲಿ ವಿರೋಧ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳು ಅಷ್ಟೇ ಮೋಸಗಾರರುವವು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಹಸ್ತದ ಕೊನೆಯ ೩ ಮತ್ತು ಚಿತ್ರಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ, ತಾ ೬-೭-೧೦ ಅನುಕೂಲ.

## ತುಲಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೂ ಹೆಂಡತಿಗೆ ಕಿರುಕಳ ಕ್ಲೇಶ. ಆಪ್ತ ಸುಖ ಉತ್ತಮ. ರೋಖ ಸಂಗ್ರಹ ಇಲ್ಲವೆ ಜಂಗಮ ವಸ್ತುಗಳಲ್ಲಿ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಲಾಭಬಹಳ. ತೊಂದರೆಯಿಂದ ಸರಿಪಡುವ ಸ್ಥಿತಿಯುಳ್ಳಲ್ಲ ಆದರೆ ಅಮಾನದಿಂದ ಲಾಭ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲ ವಿಜಯ. ಮಿತ್ರ ಸುಖ ಉತ್ತಮ. ಸ್ವಲ್ಪ ಅಪಚಿತ ಲಾಭದ ಸಂಭವ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ ೪—೫—೮—೯ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚು. ಮಕ್ಕಳಿಂದ ಅಪ್ರಿಯ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಅನುಕೂಲ. ಆದರೆ ಪ್ರತಿಷ್ಠೆಗೆ ಬಗೆಬಗೆಯ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ತೊಂದರೆ ಮತ್ತು ವೆಚ್ಚ ವಿಪರೀತ. ಆದರೆ ಯಶಸ್ಸಿನ ಆಶೆ ಹೆಚ್ಚಾಗಿ ತೋರುವ ಸ್ಥಿತಿ. ಮಿತ್ರ ಸುಖ ಉತ್ತಮ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜೇಷ್ಠಾದ ೧ ನೇ ಚರಣಕ್ಕೆ ತೊಂದರೆ ಹೆಚ್ಚು. ತಾ೹ ೬—೭—೧೦ ಅನುಕೂಲ.

## ಧನು

ಪ್ರಕೃತಿ ನಿಮ್ಮದು ಅನುಕೂಲ. ಆದರೆ ಹೆಂಡತಿ ಮತ್ತು ಮಕ್ಕಳ ಪ್ರಕೃತಿ ಸಾಧಾರಣವಾಗಿ ಕೆಟ್ಟದ್ದೇ ಅಲ್ಲದೆ ಅವರೊಡನೆ ಮೇಲಿಂದ ಮೇಲೆ ವಿರೋಧ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆಯೇ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಅನುಕೂಲ. ಆದರೆ ಪ್ರತಿಷ್ಠೆ ಛಿನ್ನವಿಛಿನ್ನವಾಗುವ ಸಂಭವ ಕಣ್ಣುಮುಚ್ಚಿ ವಿಪರೀತ ವೆಚ್ಚ ಮಾಡುವ ಅಪರಿಹಾರ್ಯ ಪ್ರಸಂಗ ಪರಸ್ತ್ರೀ ಬಗ್ಗೆ ಕುಬುದ್ಧಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಹಾನಿ ಒಂದು ಪಟ್ಟಾದರೆ ನಿಮ್ಮದು ಇಮ್ಮಡಿ. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢದ ೧ನೇ ಚರಣಕ್ಕೆ ತೊಂದರೆ ಹೆಚ್ಚು. ತಾ ೪-೫-೮ ಅನುಕೂಲ.

## ಮಕರ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ನಿಮ್ಮನಿಮ್ಮಲ್ಲಿ ಮೇಲಿಂದ ಮೇಲೆ ಮತಭೇದ. ಮಕ್ಕಳಿಂದ ಅಪ್ರಿಯ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅಂದಾಜಿಗಿಂತ ಬಹಳ ದೊಡ್ಡ ಪ್ರಮಾಣದಲ್ಲಿ. ಆದರೆ ಕೇವಲ ಈಷೆಗಾಗಿಯೆ ಬಹಳ ವೆಚ್ಚ. ಮತ್ತು ಯಾವದೊಂದು ಅಯೋಗ್ಯ ದುಷ್ಕೃತ್ಯ ಮಾಡಲ್ಪಡುವ ಸಂಭವ ಮಿತ್ರ ಸುಖ ಉತ್ತಮ. ವಾದದಲ್ಲಿ ವಿಜಯ. ಇಲ್ಲವೆ ಇಲ್ಲವೆ ಒಡಂಬಡಿಕೆ. ಪ್ರವಾಸಾದಿ ಕೆಲಸ ಅನುಕೂಲ ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ೧ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ ೫—೬—೭ ಅನುಕೂಲ.

## ಕುಂಭ

ಪ್ರಕೃತಿ ಸಾಧಾರಣವೆ. ಹೆಂಡತಿ ಮತ್ತು ಪ್ರಾಪಂಚಿಕ ಸುಖ ಅಷ್ಟಕಷ್ಟೆ ಸ್ಥಾವರದಲ್ಲಿ ಹಾನಿ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅಂದಾಜಿಗಿಂತ ಹೆಚ್ಚು ಮಿತ್ರ ಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ, ಪ್ರವಾಸಾದಿ ಕೆಲಸ ಹಿತಕರ. ಆದರೆ ಶತತಾರಕೆಯ ಕೊನೆಯ ಮತ್ತು ಪೂರ್ವಾಭಾದ್ರಪದ ೧ ನೇ ಚರಣಕ್ಕೆ ತೊಂದರೆಯಿಂದ ಯಶಸ್ಸು. ತಾ. ೪—೫—೬—೭ ಅನುಕೂಲ.

## ಮೀನ

ಸ್ವತಃದ ಮತ್ತು ಮಕ್ಕಳ ಆರೋಗ್ಯ ಅಲ್ಪಸ್ವಲ್ಪ ಕೆಡುವದು. ಆದರೆ ಹೆಂಡತಿಯದು ಅನುಕೂಲ. ಉಳಿದ ಪ್ರಾಪಂಚಿಕ ಸುಖ ಒಟ್ಟಾರೆ ಅನುಕೂಲ ಉದ್ಯೋಗದಲ್ಲಿ ಪ್ರಗತಿ ಬಹಳ. ಮತ್ತು ಲಾಭ ತುಂಬ. ಮಾಡಿದ ಕೆಲಸದ ಕೃತಜ್ಞತೆಗಾಗಿ ಅನೇಕರಿಂದ ಒಳ್ಳೆ ಮಾನುಮಕಾಣಿಕೆಗಳು ಆದರೆ ಪ್ರಾಸ್ತಾವಿಕವಾಗಿ ಪ್ರತಿಷ್ಠೆ ಕಡಿಮೆಯೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ವಿಜಯ ಮಿತ್ರ ಸುಖ ಅನುಕೂಲ ಆದರೆ ಶತ್ರುಗಳು ನಿಮ್ಮ ವರ್ಚಸ್ಸ ಕಡಿದುಗೊಳಿಸಲು ದೀರ್ಘ ಪ್ರಯತ್ನ ಮಾಡುವರು. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರ ವ್ಯವಹಾರವೂ ಹೆಚ್ಚು ಅನುಕೂಲ. ಉತ್ತರಾ ಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೭—೮—೯—೧೦ ಅನುಕೂಲ.

# ಮಾರಾಟಗಳ ಮೇಲಿನ ಕರವು

## ಈ ಕೆಳಗಿನ ಸರಕುಗಳು ಕರದಿಂದ ಮಾಫು ಮಾಡಲ್ಪಟ್ಟಿವೆ ಎಂದು ಜಾಹೀರ ಮಾಡಲಾಗಿದೆ

ಯಾವತ್ತೂ ನಮೂನೆಗಳ ಅಕ್ಕಿಯ ಸಹಿತವಾಗಿ ಯಾವತ್ತೂ ಧಾನ್ಯಗಳು ಮತ್ತು ಬೇಳೆಗಳು ಆಟಾ, ಮೈದಾ, ಸಜ್ಜಿಗೆ ಹಾಗೂ ಹೊಟ್ಟು ಇವುಗಳ ಸಹಿತವಾಗಿ ಹಿಟ್ಟು, ಬ್ರೆಡ್, ಮಾಂಸ, ಮೀನು, ತಾಜಾ ತತ್ತಿಗಳು, ಕೋಳಿ ಮುಂತಾದವುಗಳ ಸಹಿತವಾಗಿ ದನಕರುಗಳು. ವೈದ್ಯಕೀಯ ರೀತಿಯಿಂದ ತಯಾರಿಸಲ್ಪಟ್ಟಂಥವುಗಳ ಹೊರ್ತಾಗಿ ಇತರ ಹಸಿ ಅಥವಾ ಒಣ ಕಾಯಿಪಲ್ಲೆಗಳು. ಹಣ್ಣುಗಳು—ತಾಜಾ ಹಾಗೂ ಒಣಗಿದಂಥವು. ಬೇಯಿಸಿದ ಆಹಾರವು ಪೂರೈಸಲ್ಪಡುವಂಥ ಹೊಟೇಲು, ವಿಶ್ರಾಂತಿಗೃಹ ಮುಂತಾದವುಗಳಲ್ಲಿ ಒಂದು ಊಟದ ಖರ್ಚು ಎಂಟಾಣೆಗೆ ಮಿಕ್ಕಿದ ಹೊರ್ತು [ಬೆಲ್ಲ, ಸಕ್ಕರೆ ಹಾಗೂ ಕಾಕಂಬಿ, ಉಪ್ಪು, ಮೆಣಸು, ಹುಣಿಸೆಹಣ್ಣು ಹಾಗೂ ಮೆಣಸಿನಕಾಯಿ, ತಾಜಾಹಾಲು, ಗಟ್ಟಿ ಮಾಡಿದ ಹಾಲು, ಬೇರ್ಪಡಿಸಿದ ಹಾಲು, ಹಾಲಿನ ಪುಡಿ ಹಾಗೂ ಬಾಲಕರ ಆಹಾರಗಳು.

ನೀರು ( ಏರಿಏಟೆಡ್ ವಾಟರ್ ) ಸೋಡಾ ಮುಂತಾದ್ದನ್ನೂ ಖನಿಜ ದ್ರವ್ಯಯುಕ್ತ ನೀರನ್ನೂ ಹೊರ್ತುಪಡಿಸಿ ಮಜ್ಜಿಗೆ ಮತ್ತು ಮೊಸರು, ಕುಸಿಬೆಎಣ್ಣೆ ಮತ್ತು ಎಳ್ಳೆಣ್ಣೆ, ಅರಿಶಿಣಪುಡಿ, ಅಡಿಕೆ.

ಗಾಣದ ಮೇಲೆ। ಮನುಷ್ಯನಿಂದಾಗಲಿ ಪಶುಗಳ ಸಹಾಯದಿಂದಾಗಲಿ ತೆಗೆದ ಯಾವತ್ತೂ ತಿನ್ನುವ ಎಣ್ಣೆಗಳು

ಚಿಮಣಿಎಣ್ಣೆ, ಕ್ವಿನೀನು,

( ಬೀಡಿ, ಚಿರೂಟು, ಸಿಗರೇಟು, ಪ್ಯಾಪ ಮತ್ತು ಹುಕ್ಕಾ ಇವುಗಳ ತಂಬಾಕು ಮುಂತಾದವುಗಳ ಸಹಿತವಾಗಿ ) ಯಾವದೇ ನಮೂನೆಯ ತಂಬಾಕು, ಅದು ತಯಾರಿಸಿದ್ದಿರಲಿ ಅಥವಾ ಇಲ್ಲದಿರಲಿ, ಬೆಂಕಿ ಪೆಟ್ಟಿಗೆಗಳು.

ಉರವಲಕಟ್ಟಿಗೆ ಮತ್ತು ಇದ್ದಲಿ

ಪ್ರಾಂತಿಕ ಸರಕಾರದವರು ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆ ಕೊಟ್ಟು ನಮೂದಿಸಬಹುದಾದಂಥ ಪ್ರಕಾರದ ಹಾಗೂ ದರದ ಅಗ್ಗದ ಅರಿವೆಯು ಅಂದರೆ:—

(ಅ) ಪ್ರತಿಯೊಂದ ವಾರಿಗೆ ೧೨ ಆಣೆಗೆ ಮಿಕ್ಕದಂಥ ದರದಿಂದ ಮಾರಲ್ಪಡುವ ಧೋತರಗಳು.

(ಬ) ಪ್ರತಿಯೊಂದು ವಾರಿಗೆ ೧ ರೂಪಾಯಿಗೆ ಮಿಕ್ಕವ ಬೆಲೆಯ ಸೀರೆಗಳು.

(ಕ) ಪ್ರತಿಯೊಂದು ತುಂಡಿಗೆ ೩ ರೂಪಾಯಿಗಳಿಗೆ ಮಿಕ್ಕದ ಬೆಲೆಯ ಲುಂಗಿಗಳು.

ಗಿರಣಿಯ ನೂಲಿನಿಂದಲೇ ಅಥವಾ ಕೈಯಿಂದ ತೆಗೆದ ನೂಲಿನಿಂದಲೇ ಕೈಮಗ್ಗದ ಮೇಲೆ ನೇಯಲಾದ ಅರಿವೆ.

ಪ್ರತಿಯೊಂದಕ್ಕೆ ೬ ರೂಪಾಯಿಗಿಂತ ಹೆಚ್ಚು ಬೆಲೆಯಿಲ್ಲದ ಉಣ್ಣೆಯ ಕಂಬಳಿಗಳು.

ಮುಂಬಯಿ ಪ್ರಾಂತದ ಸಲುವಾಗಿ ಡಾಯರೆಕ್ಟರ ಅಫ್ ಪಬ್ಲಿಕ್ ಇನ್‌ಸ್ಟ್ರಕ್ಶನ್ ಇವರಿಂದ ಮಂಜೂರು ಮಾಡಲ್ಪಟ್ಟ ಕ್ರಮಿಕ ಪುಸ್ತಕಗಳು, ಪಾಟಿಗಳು, ಪಾಟಿಯ ಪೆನ್ಸಿಲುಗಳು, ಖಡುಗಳು, ಕ್ರೇಯಾನುಗಳು (ಬಣ್ಣದ ಖಡುಗಳು) ಮತ್ತು ಇಂಚಪಟ್ಟಿಗಳು, ನಿಜವಾದ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಣ ಸಂಸ್ಥೆಗಳಿಗೆ ಮಾರಾಟ ಮಾಡಲ್ಪಟ್ಟಾಗ:—

ಶೈಕ್ಷಣಿಕ ಸಂಸ್ಥೆಗಳಿಂದ ಮಾರಾಟ ಮಾಡಲ್ಪಟ್ಟ ಎಕ್ಸರಸಾಯಿಜ್ ಮತ್ತು ಡ್ರಾಯಿಂಗ ಪುಸ್ತಕಗಳು.

ಎಲ್ಲ ಧರ್ಮಗಳ ಧಾರ್ಮಿಕ ಗ್ರಂಥಗಳು.

ವರ್ತಮಾನ ಪತ್ರಗಳು.

ಮೇವು, ಹತ್ತಿಯ ಕಾಳು, ಹಾಗೂ ಇತರ ಮಿಶ್ರಣಗಳ ಸಹಿತವಾಗಿ ದನಗಳ ಆಹಾರಗಳು,

ಫರ್ಟಿಲ್ಯಾಝರುಗಳು

ಗೊಬ್ಬರ, ಎಣ್ಣೆಯ ಹಿಂಡಿಯ ಸಹಿತವಾಗಿ,

ಮನುಷ್ಯರಿಂದಲೇ ಅಥವಾ ಪಶುಗಳ ಸಹಾಯದಿಂದಲೇ ನಡಿಸಲ್ಪಡುವ ಒಕ್ಕಲತನದ ಸಾಧನಗಳು.

ಹದಮಾಡಿದ ತೊಗಲು

ಹತ್ತಿ ಅರಿಸಿದ್ದು, ಅಥವಾ ಅರಿಸದೆ ಇದ್ದದ್ದು.

ಹತ್ತಿಯ ನೂಲು

ಹತ್ತಿಯ ಕಾಳು

ಕೋಲ್ ಗ್ಯಾಸ್

(ಅ) ಸರಕಾರದವರ ಅಥವಾ ಯಾವದೇ ಸ್ಥಾನಿಕ ಅಧಿಕಾರೀ ಸಂಘದ, ಅಥವಾ

(ಬ) ( ವಾಸವಾಡುವ ಅಥವಾ ಕಚೇರಿಯ ನಿವೇಶಗಳಲ್ಲಿ ಹೊರ್ತಾಗಿ ಇತರ ) ಯಾವದೇ ಔದ್ಯೋಗಿಕ, ಉದ್ದಿಮೆಯ ಸಂಬಂಧದಿಂದ ಉಪಯೋಗದ ಸಲುವಾಗಿ ಗ್ಯಾಸ ಸಪ್ಲಾಯ ಕಂಪನಿಯಿಂದ ಮಾರಾಟ ಮಾಡಲ್ಪಟ್ಟಾಗ -

ಬಂಗಾರ ಬೆಳ್ಳಿಗಳ ಗಟ್ಟಿಗಳು ಹಾಗೂ ನಾಣ್ಯಗಳು ಸನ್ ೧೮೭೮ ನೇ ಇಸವಿಯ ಮುಂಬಯಿ ಅಬಕಾರೀ ಅಕ್ಟಿನನ್ವಯ ಅಥವಾ ಸನ್ ೧೮೭೮ ನೇ ಇಸವಿಯ ಅಫೀಮಿನ ವಿಷಯದ ಅಕ್ಟಿನನ್ವಯ ಡ್ಯೂಟಿಯು ವಸೂಲು ಮಾಡಲ್ಪಡುತ್ತಿರುವ ಅಥವಾ ವಸೂಲು ಮಾಡಲ್ಪಡಬಹುದಾದ ಸರಕುಗಳು, ಅಂದರೆ:—

( ಆಮದು ಮಾಡಲ್ಪಟ್ಟ ಹಾಗೂ ಹಿಂದುಸ್ತಾನದಲ್ಲಿ ತಯಾರಿಸಲ್ಪಟ್ಟ )

ವಿದೇಶೀ ಸರಾಯಿ, ದೇಶೀ ಸರಾಯಿ, ಹೆಂಡ, ಡಿನೇಚರ್ಡ ಸ್ಪಿರೀಟ, ಅಫೀಮು ಮತ್ತು ಭಾಂಗ, ಗಾಂಜಾ ಹಾಗೂ ಅವುಗಳಿಂದ ತಯಾರಿಸಲ್ಪಟ್ಟ ಪದಾರ್ಥಗಳು.

ವಿದ್ಯುಚ್ಛಕ್ತಿ

ಮೋಟಾರ ಸ್ಪಿರೀಟು

ಸನ್ ೧೮೯೯ ನೇ ಇಸವಿಯ ಹಿಂದುಸ್ತಾನದ ಸ್ಟಾಂಪ್ ಅಕ್ಟಿನ ಠರಾವುಗಳ ಪ್ರಕಾರ ಯೋಗ್ಯ ರೀತಿಯಿಂದ ಅಧಿಕಾರ ಕೊಡಲ್ಪಟ್ಟ ಟೆಂಡರರು ಮಾರಿದ ಸ್ಟಾಂಪ್ ಕಾಗದ.

ಟಿಪ್ಪಣಿ:— ಇದು, ಕರದಿಂದ ಮಾಫು ಮಾಡಲಾದ ಸರಕುಗಳ ಸರಿಯಾದ ಯಾದಿಯು ಇರುತ್ತದೆ. ಮತ್ತು ಇದನ್ನು ಕತ್ತರಿಸಿ ನಿಮ್ಮ ಮಾಹಿತಿಯ ಸಲುವಾಗಿ ಇಟ್ಟುಕೊಳ್ಳಿರಿ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.